# ವರ್ಣ ಮತ್ತು ಜಾತಿ

ಭಾರತೀಯ ಸಮಾಜದ ಸ್ಥೂಲ ವಿಭಾಗೀಕರಣಗಳು ಮತ್ತು ಉಪ-ವಿಭಾಗೀಕರಣಗಳು ಸಂಕೀರ್ಣ ಹಾಗೂ ಗೊಂದಲಮಯವಾಗಿವೆ. ಒಂದು ಹಂತದ ಆಚೆಗೆ ಅವುಗಳನ್ನು ಹೆಚ್ಚು ಸರಳೀಕರಿಸಲು ಮುಂದಾಗುವ ಯಾವುದೇ ಪ್ರಯತ್ನ, ಸಾಮಾಜಿಕ ವಾಸ್ತವವನ್ನು ವಿರೂಪಗೊಳಿಸಬಹುದು. ಧರ್ಮಗ್ರಂಥಗಳು ಹಾಗೂ ಪುರಾತನ ಸಾಮಾಜಿಕ ಸಂಹಿತೆಗಳು ಸಾಮಾಜಿಕ ವ್ಯವಸ್ಥೆಯ ರೂಪರೇಖೆಗಳನ್ನು ನೀಡಿದ್ದು, ಅವು ಬಹುಮಟ್ಟಿಗೆ, 'ಅದು ಹೇಗಿರಬೇಕು' ಎಂದು ಹೇಳಿವೆಯೇ ಹೊರತು 'ಏಕೆ ಹೀಗಿದೆ' ಎಂದು ತಿಳಿಸಿಲ್ಲ. ವಾಸ್ತವದಲ್ಲಿ ಕಂಡುಬರುವುದು ಬೇರೆಯೇ ಆಗಿದೆ. ಸಂಪ್ರದಾಯಗಳನ್ನು ಬೇಕಾದಂತೆ ಅರ್ಥೈಸುವ, ವಿಧಿವಿಧಾನಗಳನ್ನು ತಿದ್ದುವ ಮಾರ್ಗಗಳಿವೆ. ಭಾರತದ ಕುರಿತಾಗಿ ಅನೇಕ ಬರಹಗಾರರು ಇಲ್ಲಿನ ಸನ್ನಿವೇಶವನ್ನು ಅತಿ ಎನಿಸುವಷ್ಟು ಸರಳೀಕರಿಸಿದ್ದಾರೆ. ಉದಾಹರಣೆಗೆ, "ನಾಲ್ಕು ಜಾತಿಗಳ ವ್ಯವಸ್ಥೆ"ಯ ಬಗ್ಗೆ ಮಾತನಾಡುವುದೆಂದರೆ ಅದು ಬಹುತೇಕ ದಿಕ್ಕುತಪ್ಪಿಸಿದಂತೆಯೇ ಸರಿ; ನಾವು ಗಮನಿಸಿರುವಂತೆ, ಅಸಂಖ್ಯ ಜಾತಿಗಳಿವೆ, ಅವುಗಳಲ್ಲಿ ಕೆಲವುಗಳ ವಿಂಗಡಣೆ ಹಾಗೂ ಸ್ಥಾನಮಾನಗಳನ್ನು ಅಸ್ಪಷ್ಟವಾಗಿ ವ್ಯಾಖ್ಯಾನಿಸಲಾಗಿದೆ. ಕೆಲ ನಿರ್ದಿಷ್ಟ ಪ್ರದೇಶಗಳಿಗೆ ಸಂಬಂಧಿಸಿದಂತೆ ಮಾನವಶಾಸ್ತ್ರಜ್ಞರು ಹಾಗೂ ಸಮಾಜ ವಿಜ್ಞಾನಿಗಳು ನಡೆಸಿರುವ ಅಧ್ಯಯನಗಳು ಈ ವ್ಯವಸ್ಥೆ ಕಾರ್ಯನಿರ್ವಹಿಸುವ ಬಗ್ಗೆ ಅವಲಂಬನೀಯ ದಾಖಲೆಗಳನ್ನು ಒದಗಿಸುತ್ತವೆ. ಆದರೆ, ಹಾಗೆಂದು ಅವನ್ನು ರಾಷ್ಟ್ರೀಯ ಚರ್ಚಾವಿಷಯವಾಗಿ ಪ್ರಕ್ಷೇಪಿಸಲಾಗದು (ಪ್ರೊಜೆಕ್ಟ್), ಏಕೆಂದರೆ ದೇಶದ ವಿವಿಧ ಭಾಗಗಳಲ್ಲಿ ವಿವಿಧ ರೀತಿಯಲ್ಲಿ ಈ ವ್ಯವಸ್ಥೆಯು ಕಾರ್ಯಾನ್ವಿತಗೊಳ್ಳುತ್ತದೆ. ಸಮೂಹಗಳು ಮತ್ತು ಸಮುದಾಯಗಳು ನಿರಂತರವಾಗಿ ತಮ್ಮ ಅಸ್ಮಿತೆಗಳನ್ನು ಪುನರ್ವ್ಯಾಖ್ಯಾನಿಸುತ್ತಿರುತ್ತವೆ ಅಥವಾ ತಮ್ಮ ಹಿನ್ನೆಲೆಗಳನ್ನು ಪುನರ್ರಚಿಸುತ್ತಿರುತ್ತವೆ. ಹೀಗಾಗಿ, ಅವುಗಳ ಸ್ಥಾನಮಾನ ಸಹ ಬದಲಾಗುತ್ತಿರುತ್ತದೆ. ವ್ಯವಸ್ಥೆಯೊಳಗಿನ ತಮ್ಮ ಸ್ಥಾನಮಾನದ ಕುರಿತಾದ ಅವುಗಳ ಗ್ರಹಿಕೆಗಳೂ ಪದೇಪದೇ ಬದಲಾಗುತ್ತಿರುತ್ತವೆ; ಆದರೆ, ಹೀಗೆ ಪರಿವರ್ತಿತವಾದ ಅಸ್ಮಿತೆಗೆ ಸಾರ್ವಿಕ (ಜೆನರಲ್) ಸಾಮಾಜಿಕ ಮನ್ನಣೆ ದೊರೆಯುವುದು ನಿಧಾನವಾಗಿರುತ್ತದೆ.

ಓರ್ವ ಭಾರತೀಯ ಅನೇಕ ಗುರುತುಪಟ್ಟಿಗಳನ್ನು ಹೊಂದಿರುತ್ತಾನೆ. ಆತ ಅಥವಾ ಆಕೆ ಹೇಗೆ ತಮ್ಮನ್ನು ತಾವು ಗುರುತಿಸಿಕೊಳ್ಳಬೇಕು ಎನ್ನುವುದನ್ನು ಸಂದರ್ಭಗಳು ನಿರ್ಧರಿಸುತ್ತವೆ. ಕೆಲ ಸಂದರ್ಭಗಳಲ್ಲಿ ಧರ್ಮ, ವಾಸಿಸುವ ಸ್ಥಳ ಅಥವಾ ಕುಟುಂಬದ ಹೆಸರು ಮಾತ್ರವೇ ಸಾಕಾಗಬಹುದು. ಆದರೆ, ಉಳಿದವುಗಳಲ್ಲಿ ಜಾತಿ, ಗೋತ್ರ ಮತ್ತು ಕುಲಗಳೆಲ್ಲವನ್ನೂ ವ್ಯಕ್ತಿಯೊಬ್ಬರು ಹೇಳಬೇಕಾಗಬಹುದು. ಜಾತಿಯನ್ನು ಆಂಗ್ಲ ಭಾಷೆಯಲ್ಲಿ ಕ್ಯಾಸ್ಟ್ ಎನ್ನಲಾಗುತ್ತದೆ, ಆದರೆ, ಈ ಆಂಗ್ಲಪದವು ಗೊಂದಲಕ್ಕೆ ದೂಡುವಷ್ಟು ವಿವಿಧ ಅರ್ಥಗಳಲ್ಲಿ ಬಳಕೆಯಾಗುತ್ತದೆ. ಒಂದು ಇಡೀ ವರ್ಣವನ್ನು ಗುರುತಿಸಲು ಅದನ್ನು ಹೇಳಬಹುದು, ಅಥವಾ ನಿರ್ದಿಷ್ಟ ಜನ್ಮಜಾತ ಸ್ಥಾನಮಾನವುಳ್ಳ, ತಮ್ಮೊಳಗೇ ವಿವಾಹ ಸಂಬಂಧ ಏರ್ಪಡಿಸಿಕೊಳ್ಳುವ (ಸಜಾತಿ ವಿವಾಹ) ಸಮುದಾಯಗಳನ್ನು ಸೂಚಿಸಲು ಬಳಸಬಹುದು, ಅಥವಾ ಅಂತಹ ಸಮೂಹದ ಉಪ-ವಿಭಾಗ ಅಥವಾ ಕವಲನ್ನು ಅದು ವಿವರಿಸಬಹುದು. ಈ ಕೃತಿಯುದ್ದಕ್ಕೂ ಜಾತಿ ಎನ್ನುವ ಪದವನ್ನು ಮೇಲಿನ ಈ ಮೂರು ಅರ್ಥಗಳಲ್ಲಿ ಎರಡನೆಯ ಅರ್ಥವನ್ನು ಸೂಚಿಸಲು ಬಳಸಲಾಗಿದೆ. ಇನ್ನು ಗೋತ್ರ ಎನ್ನುವುದರ ಬಗ್ಗೆ ಹೇಳುವುದಾದರೆ, ಇದು ಜಾತಿಯೊಳಗಿನ ಅನ್ಯಗೋತ್ರ ವಿವಾಹವನ್ನು ಏರ್ಪಡಿಸಿಕೊಳ್ಳುವ ಉಪವಿಭಾಗವಾಗಿದೆ. ಅಂದರೆ, ಇದರಲ್ಲಿ ಜಾತಿಯೊಳಗೇ ಮದುವೆಯಾದರೂ ತಮ್ಮ ಗೋತ್ರದ ಹೊರಗೆ ಮದುವೆಯಾಗುತ್ತಾರೆ. ಗೋತ್ರ ಎನ್ನುವುದು ಬಹಳ ಹಿಂದೆ ಒಬ್ಬನೇ ಮೂಲಪುರುಷನಿಂದ ಮೂಡಿ ಬಂದಿರುವಂತಹುದಾಗಿರುತ್ತದೆ. ಸಾಮಾನ್ಯವಾಗಿ ಈ ಮೂಲಪುರುಷ ಓರ್ವ ಪೌರಾಣಿಕ ವ್ಯಕ್ತಿ ಅಥವಾ ಋಷಿಯಾಗಿರುತ್ತಾನೆ; ಅನೇಕ ಜಾತಿಗಳು, ಅದರಲ್ಲಿಯೂ ಪ್ರಮುಖವಾಗಿ ಸಾಂಪ್ರದಾಯಿಕ ಆಚರಣೆಗಳ ಶ್ರೇಣೀಕರಣದಲ್ಲಿ ಕೆಳಸ್ತರದಲ್ಲಿರುವಂತಹವು, ತಮ್ಮ ಬುಡಕಟ್ಟಿನ ಸಾಂಕೇತಿಕ ನಂಬಿಕೆಗಳನ್ನು ಉಳಿಸಿಕೊಂಡಿದ್ದು, ಅದರಂತೆ ಪ್ರಾಣಿ ಅಥವಾ ನಿರ್ಜೀವ ವಸ್ತುವಿನೊಂದಿಗಿನ ಗಟ್ಟಿಯಾದ ನಂಟಿನ ಹಿನ್ನೆಲೆ ಹೊಂದಿರುತ್ತವೆ. ಇನ್ನು ಕುಲ (ಅಥವಾ ವಂಶ) ಎನ್ನುವುದು ಐದಾರು ತಲೆಮಾರುಗಳ ವಂಶಾವಳಿಯನ್ನು ಸೂಚಿಸುತ್ತದೆ. ಇದರಾಚೆಗೆ ಈ ವಂಶಾವಳಿಯ ರೇಖೆ ಮಸುಕಾಗುತ್ತದೆ. ಕೆಲ ಜಾತಿಗಳು, ಮತ್ತು

ಬುಡಕಟ್ಟುಗಳು ಸಹ, ವೃತ್ತಿಪರ ಕವಿಗಳು ಮತ್ತು ಲಾವಣಿಗಾರರನ್ನು ಹೊಂದಿರುತ್ತವೆ. ತಮ್ಮ ಸಮೂಹದ ಪೌರಾಣಿಕ ಮೂಲಪುರುಷನವರೆಗೆ ಇವರು ವಂಶಾವಳಿಯನ್ನು ಒಯ್ಯಬಲ್ಲವರಾಗಿದ್ದು, ಸಾಮಾನ್ಯವಾಗಿ ಅತ್ಯಂತ ಉದ್ದನೆಯ ವಂಶಾವಳಿಯನ್ನು ನೀಡಬಲ್ಲವರಾಗಿರುತ್ತಾರೆ. ಈ ಬಗೆಯ ಬಹಳಷ್ಟು ವಂಶಾವಳಿಯು ಕಾಲ್ಪನಿಕವಾಗಿರುತ್ತವೆ. ಅದೇ ರೀತಿ, ಪೂರ್ವಜರ ಉದಾತ್ತ ಕಾರ್ಯಗಳು, ಶೌರ್ಯ ಮತ್ತು ಪರಾಕ್ರಮಗಳ ವಿವರಗಳು ಕೂಡ.

ಮೊದಲಿಗೆ ನಮ್ಮ ಗಮನವನ್ನು ವರ್ಣದ ಕಡೆ ಹರಿಸೋಣ, ನಂತರ ಜಾತಿಯ ಬಗ್ಗೆ ಗಮನಿಸೋಣ.

## ವರ್ಣ

ಹಿಂದೂ ಸಾಮಾಜಿಕ ವ್ಯವಸ್ಥೆಯಲ್ಲಿ ವರ್ಣ ಎನ್ನುವುದು ಕೇವಲ ಒಂದು ಪರಾಮರ್ಶ ಸೂಚಕ: ಅದು ಸಾಮಾಜಿಕ ಸಂರಚನೆಯಲ್ಲಿನ ಕಾರ್ಯನಿರ್ವಹಿಸುವ ಘಟಕವಾಗಿರದೆ, ಕೇವಲ ಸ್ಥೂಲವಾಗಿ ವಿವಿಧ ಜಾತಿಗಳ ಜನ್ಮಜಾತ ಸ್ಥಾನಮಾನಗಳನ್ನು ಸೂಚಿಸುವಂತಹದ್ದಾಗಿರುತ್ತದೆ. ಹಾಗಾಗಿ ಅದು ವರ್ಗೀಕರಣ ಮಾಡಲು ಬಳಸುವ ಸಾಧನವೂ ಸಹ. ವರ್ಣಗಳೊಳಗೆ ಒಂದೇ ರೀತಿಯ ಆಚಾರಗಳ ಜನ್ಮಜಾತ ಸ್ಥಾನಮಾನಗಳುಳ್ಳ ಜಾತಿಗಳನ್ನು ಗುಂಪುಗೂಡಿಸಿ ಶ್ರೇಣೀಕರಣದ ಆಧಾರದಲ್ಲಿ ವಿಭಾಗಿಸಲಾಗುತ್ತದೆ. ಮೇಲ್‌ಸ್ತರದ ಮೂರು ಹಂತಗಳಾದ ಬ್ರಾಹ್ಮಣ, ಕ್ಷತ್ರಿಯ, ಮತ್ತು ವೈಶ್ಯರನ್ನು ಎರಡು ಬಾರಿ ಜನಿಸಿದವರು ಎಂದು ಪರಿಗಣಿಸಲಾಗಿದ್ದು, ಜೈವಿಕ ಜನನ ಮಾತ್ರವೇ ಅಲ್ಲದೆ, ದೀಕ್ಷಾಸಂಸ್ಕಾರಗಳಿಂದಾಗಿ ಅವರು ಎರಡನೆಯ ಬಾರಿ ಜನಿಸುತ್ತಾರೆ. ನಾಲ್ಕನೆಯ ಹಂತವು ಶೂದ್ರರನ್ನು ಒಳಗೊಳ್ಳುತ್ತದೆ, ಇದರಲ್ಲಿ ಅನೇಕ ವಿಧದ ಕುಶಲಕರ್ಮಿಗಳು ಮತ್ತು ವೃತ್ತಿ ವಿಶಿಷ್ಟವಾದ ಜಾತಿಗಳು ಬರುತ್ತವೆ. ಇವರು ಸ್ವಚ್ಛವಾದ ಅಂದರೆ, ಮೈಲಿಗೆರಹಿತ ವೃತ್ತಿಗಳಲ್ಲಿ ತೊಡಗಿಕೊಂಡಿರುವವರು. ವರ್ಣದ ಶ್ರೇಣೀಕರಣ ಇಲ್ಲಿಗೇ ಮುಗಿಯುತ್ತದೆ. ಆದರೆ, ಐದನೆಯ ಹಂತವು ಇದ್ದು, ಇದು ಅಸ್ವಚ್ಛವಾದ, ಮೈಲಿಗೆಯನ್ನು ಉಂಟುಮಾಡುವುದು ಎಂದು ಪರಿಗಣಿಸಲಾದ ವೃತ್ತಿಗಳಲ್ಲಿ ತೊಡಗಿಕೊಂಡಿರುವವರನ್ನು ಒಳಗೊಳ್ಳುತ್ತದೆ. ಇವರನ್ನು ಅಂತ್ಯಜರು ಎನ್ನಲಾಗುತ್ತದೆ, ಅರ್ಥಾತ್, ವರ್ಣ ವ್ಯವಸ್ಥೆಯಿಂದ ಹೊರಗಿರುವವರು. ಈ ಹಂತವು ಅಸ್ಪೃಶ್ಯರು ಎಂದು ಕರೆಯಲ್ಪಡುತ್ತಿದ್ದ ಜಾತಿಗಳನ್ನು ಒಳಗೊಳ್ಳುತ್ತದೆ. ಅಸ್ಪೃಶ್ಯತೆಯನ್ನು ಕಾನೂನಾತ್ಮಕವಾಗಿ ನಿಷೇಧಿಸಿದ್ದರೂ ದೇಶದ ಬಹುತೇಕ ಎಲ್ಲ ಭಾಗಗಳಲ್ಲಿಯೂ ಅದು ಕಾಣದಂತೆ ಹಾಗೂ ಕಾಣುವಂತೆ ಆಚರಣೆಯಲ್ಲಿದೆ. ಪರಿಶಿಷ್ಟ ಜಾತಿಗಳು ಅಂದರೆ, ಅಂತ್ಯಜರು ಅಥವಾ ಗಾಂಧೀಜಿಯವರಿಂದ ಹರಿಜನರು ಎಂದು ಕರೆಯಲ್ಪಡುತ್ತಿದ್ದವರು ಹಾಗೂ ಇಂದು ತಮ್ಮನ್ನು ತಾವು ದಲಿತರು ಎಂದು ಗುರುತಿಸಿಕೊಳ್ಳುವವರ ಸಂಖ್ಯೆ ಭಾರತದ ಜನಸಂಖ್ಯೆಯ ಸುಮಾರು ಶೇ.16ರಷ್ಟಿದೆ. ಅದೇ ರೀತಿ, ಇದೇ ವರ್ಗದಲ್ಲಿಯೇ ಬರುವ, ಆದರೆ ಬಹುತೇಕವಾಗಿ ಅಸ್ಪೃಶ್ಯತೆಯ ಅಪಮಾನದಿಂದ ಹೊರತಾಗಿರುವ ಪರಿಶಿಷ್ಟ ಪಂಗಡಗಳು - ಆದಿವಾಸಿ, ಆದಿಮಜಾತಿ ಅಥವಾ ಗಿರಿಜನ ಎಂದು ಕರೆಯಲ್ಪಡುವವರ ಸಂಖ್ಯೆ ದೇಶದ ಜನಸಂಖ್ಯೆಯ ಶೇ.7ರಷ್ಟಿದೆ. ಹಾಗಾಗಿ, ಒಟ್ಟಾರೆ, ಐದು ಹಂತದ ವರ್ಗೀಕರಣವಿದ್ದು ಇವುಗಳಲ್ಲಿ ಬೃಹತ್ ಸಂಖ್ಯೆಯಲ್ಲಿ ಜಾತಿಗಳನ್ನು ವರ್ಗೀಕರಿಸಿ, ಗುಂಪುಗಳನ್ನಾಗಿಸಲಾಗಿದೆ.

ಈ ವ್ಯವಸ್ಥೆಯು ಅಚ್ಚುಕಟ್ಟಾಗಿ, ಆಕರ್ಷಕವಾಗಿ ಇದೆಯಾದರೂ, ಇದು ಅತ್ಯಂತ ಆದರ್ಶಯುತವೂ ಹಾಗೂ ಅತ್ಯಂತ ಸರಳೀಕೃತವೂ ಆಗಿದೆ. ಗುಣಾತ್ಮಕತೆ ಹಾಗೂ ಕಾರ್ಯನಿರ್ವಹಣೆಯ ನಡುವಿನ ಜೈವಿಕ ಸಂಬಂಧಗಳ ಆಧಾರದಲ್ಲಿ ಸಮಾಜದ ಒಂದು ಸ್ಥೂಲ ವಿಭಾಗೀಕರಣದ ಮಾದರಿಯನ್ನು ಇದು ಮುಂದಿರಿಸುತ್ತದೆ. ಆದರೆ, ವಾಸ್ತವದಲ್ಲಿ ನಿಜಕ್ಕೂ ಹೆಚ್ಚು ಸಂಕೀರ್ಣವಾಗಿರುವ ಸಾಮಾಜಿಕ ಶ್ರೇಣೀಕರಣವನ್ನು ಇದು ಬಿಂಬಿಸುವುದಿಲ್ಲ. ಈ ಹಿಂದೆ ತಿಳಿಸಿದ ನಾಲ್ಕು ಹಂತದ ಶ್ರೇಣೀಕರಣವು, ಈ ಮೊದಲು ಅಸ್ಪೃಶ್ಯವಾಗಿದ್ದ ಆದರೆ ನಿಶ್ಚಿತವಾಗಿಯೂ ಹಿಂದೂ ಸಾಮಾಜಿಕ ವ್ಯವಸ್ಥೆಯ ಅಡಿಯಲ್ಲಿಯೇ ಬರುವ ಜಾತಿಗಳನ್ನು ಹೊರಗಿಡುತ್ತದೆ. ಅಲ್ಲದೆ, ಇದು ಇತರ ಅಸ್ಪಷ್ಟತೆಗಳನ್ನೂ ಹೊಂದಿದೆ. ಉದಾಹರಣೆಗೆ, ಉತ್ತರ ಮತ್ತು ಪೂರ್ವ ಭಾರತದಲ್ಲಿನ ಕಾಯಸ್ಥ ಸಮುದಾಯವನ್ನು ಯಾವ ವರ್ಣದಡಿ ವಿಂಗಡಿಸಬೇಕು? ಕೇರಳದ ನಾಯರ್ ಸಮುದಾಯವನ್ನು ಕ್ಷತ್ರಿಯ ಅಥವಾ ಶೂದ್ರ ಈ ಎರಡರಲ್ಲಿ ಯಾವ ವರ್ಣದಲ್ಲಿ ಗುರುತಿಸಬೇಕು? ನಿಜ ಹೇಳಬೇಕೆಂದರೆ, ಭಾರತದುದ್ದಗಲಕ್ಕೂ ಏಕರೂಪವಾಗಿರುವ ಶ್ರೇಣೀಕರಣ ವ್ಯವಸ್ಥೆ ಇಲ್ಲ; ಕೆಲ ಜಾತಿಗಳು ಒಂದು ಪ್ರಾಂತ್ಯದಲ್ಲಿ ಒಂದು ದರ್ಜೆಯ

ಸ್ಥಾನಮಾನವನ್ನು ಹೊಂದಿದ್ದರೆ, ಮತ್ತೊಂದು ಪ್ರಾಂತ್ಯದಲ್ಲಿ ಮತ್ತೊಂದು ದರ್ಜೆಯ ಸ್ಥಾನಮಾನವನ್ನು ಹೊಂದಿವೆ. ವರ್ಣವೂ ಸಹ ಹಿಂದೂ ಸಮಾಜದಾದ್ಯಂತ ಏಕಪ್ರಕಾರವಾಗಿ ವಿಂಗಡಿಸಲ್ಪಟ್ಟಿಲ್ಲ; ದಕ್ಷಿಣದಲ್ಲಿ ಕ್ಷತ್ರಿಯ ಅಥವಾ ವೈಶ್ಯ ಎನ್ನುವ ಅಧಿಕೃತ ಮೂಲ ಸಮುದಾಯಗಳು ಇಲ್ಲ. ಹಾಗಾಗಿ, ಮಾದರಿ ವಿನ್ಯಾಸದಲ್ಲಿ ಸ್ಪಷ್ಟವಾಗಿರುವಂತೆ ಕಾಣುವ ಈ ಶ್ರೇಣೀಕರಣದ ದರ್ಜೆಗಳು ವಾಸ್ತವದಲ್ಲಿ ನಿಚ್ಚಳವಾಗಿಲ್ಲ. ಕೆಲ ಜಾತಿಗಳ ಸ್ಥಾನಮಾನಗಳು ಅಸ್ಪಷ್ಟವಾಗಿದ್ದು, ಈ ವಿಚಾರವಾಗಿ ಪ್ರಾಜ್ಞರನ್ನು ಒಳಗೊಂಡ ಸಮಿತಿಗಳ ಮುಂದೆ, ರಾಜರ ಆಸ್ಥಾನಗಳಲ್ಲಿ ಹಾಗೂ ಇತ್ತೀಚಿನ ಕಾಲಘಟ್ಟಗಳಲ್ಲಿ ನ್ಯಾಯಾಲಯಗಳಲ್ಲಿ ವಿವಾದಗಳು ನಡೆದಿವೆ. ಇಂತಹ ವಿವಾದಗಳು ಅನೇಕ ಬಾರಿ ಸಂಘರ್ಷಕ್ಕೆ ಕಾರಣವಾಗಿದ್ದು, ಇದಕ್ಕೆ ದೊರೆತ ಉತ್ತರಗಳು ವ್ಯತಿರಿಕ್ತವಾಗಿವೆ. ಇನ್ನು ವರ್ಣಗಳ ಸ್ಥಾನಮಾನಗಳು ಪರಿವರ್ತನಶೀಲವಲ್ಲದ ಬಗ್ಗೆ ಸವಾಲೊಡ್ಡಲಾಗಿದೆ. ಜನ್ಮಜಾತ ಸ್ಥಾನಮಾನಗಳು ಉನ್ನತೀಕರಣಗೊಂಡ ಕೆಲವೊಂದು ಉದಾಹರಣೆಗಳನ್ನು ಪವಿತ್ರ ಗ್ರಂಥಗಳು ನೀಡಿವೆ. ಅದೇ ರೀತಿ, ತನ್ನಿಂದ ನಿರೀಕ್ಷಿಸಲಾದ ಗುಣಾತ್ಮಕ ವರ್ತನೆಯನ್ನು ಈಡೇರಿಸಲಾಗದ ಕಾರಣಕ್ಕಾಗಿ ಇಡೀ ಜಾತಿಯೊಂದರ ಸ್ಥಾನಮಾನವನ್ನು ಕೆಳಗಿಳಿಸಿರುವ ಉದಾಹರಣೆಗಳೂ ಇವೆ. ಭಕ್ತಿಪಂಥದ ಸಂತ ಕವಿಗಳು ಪರಿವರ್ತನಶೀಲವಲ್ಲದ ಈ ಮಾದರಿಯ ಬಗ್ಗೆ ಪ್ರಶ್ನಿಸಿದ್ದಾರೆ, ಅಲ್ಲದೆ, ಈ ವ್ಯವಸ್ಥೆಯ ಕಠೋರತೆ, ಅಸಮಾನತೆಯ ವಿರುದ್ಧ ವಿವಿಧ ಕಾಲಘಟ್ಟಗಳಲ್ಲಿ ಸಶಕ್ತ ಚಳವಳಿಗಳೂ ನಡೆದಿವೆ.

ಸಾಮಾಜಿಕ ವ್ಯವಸ್ಥೆಯ ಕಾರ್ಯನಿರ್ವಹಣೆಯಲ್ಲಿ ವರ್ಣಗಳ ವಿಭಾಗೀಕರಣಗಳು ನಿಯಮಿತ ಉಪಯೋಗಗಳನ್ನಷ್ಟೇ ಹೊಂದಿವೆ. ಜನ್ಮಜಾತ ಸ್ಥಾನಮಾನಗಳು, ಸಾಮಾಜಿಕ ಜೀವನದ ಕೆಲ ವಲಯಗಳಿಗೆ ಸಂಬಂಧಿಸಿದಂತೆ ವಿಶೇಷ ಕಾರ್ಯಗಳು ಹಾಗೂ ವರ್ತನಾ ನಡಾವಳಿಗಳ ಮಾನಕಗಳ ಕುರಿತಾದ ನಿರೀಕ್ಷೆಗಳ ಕಚ್ಚಾ ಹಾಗೂ ಸಿದ್ಧ ಸೂಚಕಗಳನ್ನಷ್ಟೇ ಇವು ನೀಡಬಲ್ಲವಾಗಿವೆ. ಈಚಿನ ದಶಕಗಳಲ್ಲಿ ವರ್ಣಗಳೆಡೆಗಿನ ಆಸಕ್ತಿ, ನಿಷ್ಠೆಗಳ ಆಧಾರದಲ್ಲಿ ಮತಗಳನ್ನು ಕ್ರೋಢೀಕರಿಸುವ ಪ್ರಯತ್ನಗಳು ನಡೆದಿವೆ. ಆದರೆ, ನಿಜಕ್ಕೂ ಈ ನಿಟ್ಟಿನಲ್ಲಿ ಕೆಲಸಮಾಡುವ, ಪ್ರಭಾವ ಬೀರುವ ಘಟಕಗಳೆಂದರೆ ಅವು ಜಾತಿ, ಕುಟುಂಬ, ವಂಶ ಮತ್ತು ಸಂಬಂಧಿಗಳ ಜಾಲಗಳು.

ಜಾತಿ ಎನ್ನುವ ವಿದ್ಯಮಾನದ ಬಗೆಗಿನ ವಿಸ್ತೃತ ಚರ್ಚೆಗೂ ಮುನ್ನ, "ಜಾತಿಗಳ" ಹುಟ್ಟಿನ ಕುರಿತಾದ ಸಿದ್ಧಾಂತಗಳನ್ನು ಸಂಕ್ಷಿಪ್ತವಾಗಿ ಗಮನಿಸೋಣ, ಇದು ನೇರವಾಗಿ ವರ್ಣಕ್ಕೆ ಸಂಬಂಧಿಸಿದ್ದು ಕೂಡ. ಹಾಗೆ ನೋಡಿದರೆ, ಈ ವಿವರಣೆ ವರ್ಣದ ಉಗಮವನ್ನು ಕುರಿತಾದದ್ದೇ ಹೊರತು ಜಾತಿಗಳದ್ದಲ್ಲ.

ದೈವಿಕ ಸೃಷ್ಟಿಯ ಸಿದ್ಧಾಂತವು ಹೆಚ್ಚು ಚಿರಪರಿಚಿತವಾಗಿರುವಂಥದ್ದು ಹಾಗೂ ಪದೇಪದೇ ಉಲ್ಲೇಖಿಸಿರುವಂಥದ್ದು. ಇದರ ಆರಂಭವನ್ನು ಋಗ್ವೇದದ ಪುರುಷಸೂಕ್ತದಲ್ಲಿ ಗುರುತಿಸಬಹುದು. ಆದಿಜೀವಿಯೂ, ಸೃಷ್ಟಿಕರ್ತನೂ ಆದ ಪುರುಷನ ಸ್ವಯಂ ಬಲಿದಾನದಿಂದ ಸಮಾಜದ ನಾಲ್ಕು ಶ್ರೇಣಿಗಳು ಸೃಷ್ಟಿಯಾದವು ಎಂದು ನಂಬಲಾಗಿದೆ. ಒಂದು ಸೂಕ್ತವಾದ ಸಾಮಾಜಿಕ ಶ್ರೇಣೀಕರಣವು ಉದ್ಭವಿಸಲೆಂದು ಪುರುಷನು ತನ್ನನ್ನು ತಾನೇ ನಾಶಪಡಿಸಿಕೊಂಡನೆಂದು ಹೇಳಲಾಗುತ್ತದೆ. ಬ್ರಾಹ್ಮಣರು ತಲೆ ಅಥವಾ ಬಾಯಿಯಿಂದ, ಕ್ಷತ್ರಿಯರು ತೋಳಿನಿಂದ, ವೈಶ್ಯರು ತೊಡೆಯಿಂದ ಹಾಗೂ ಶೂದ್ರರು ಪಾದದಿಂದ ಜನಿಸಿದರು ಎನ್ನಲಾಗುತ್ತದೆ. ಇದು, ನಾಲ್ಕು ವರ್ಣಗಳ ಸ್ಥಾನಮಾನ ಹಾಗೂ ಕರ್ತವ್ಯಗಳ ಸಾಂಕೇತಿಕ ಪ್ರತಿನಿಧಿತ್ವವಾಗಿದೆ. ದೇಹರೂಪದ ಸಾಂಸ್ಕೃತಿಕ ವ್ಯಾಖ್ಯೆಯಲ್ಲಿ ತಲೆ, ತೋಳು, ತೊಡೆ ಹಾಗೂ ಪಾದಗಳು ಅವರೋಹಣ ಶ್ರೇಣಿಯಲ್ಲಿವೆ. ಪಾರಂಪರಿಕ ಕರ್ತವ್ಯಗಳೂ ಇದಕ್ಕೆ ಅನುಗುಣವಾಗಿವೆ. ಜ್ಞಾನವನ್ನು ಪಡೆಯುವುದು ಹಾಗೂ ಪಸರಿಸುವುದು ಮತ್ತು ಯಜ್ಞಯಾಗಾದಿಗಳ ನಿರ್ವಹಣೆ ಬ್ರಾಹ್ಮಣರ ಕಾರ್ಯವಾಗಿದ್ದು ಉನ್ನತ ಸ್ಥಾನವನ್ನು ಹೊಂದಿದೆ. ನಂತರದ ಸ್ಥಾನದಲ್ಲಿ ರಕ್ಷಣೆ ಹಾಗೂ ಯುದ್ಧ, ಆಡಳಿತ ಹಾಗೂ ಸರ್ಕಾರದ ಕುರಿತ ಕ್ಷತ್ರಿಯರಿಗೆ ವಹಿಸಲಾದ ಹೊಣೆಗಾರಿಕೆಗಳಿವೆ. ಮೂರನೆಯ ಸ್ಥಾನದಲ್ಲಿ ವ್ಯಾಪಾರ ವಹಿವಾಟು ಮತ್ತು ವ್ಯವಸಾಯದ ವೈಶ್ಯರ ಕೆಲಸ ನಿರ್ವಹಣೆ ಇದೆ. ಕೊನೆಯದಾಗಿ, ತಮ್ಮ ಕೌಶಲ್ಯ ಹಾಗೂ ಶ್ರಮದಿಂದ ಇತರರ ಸೇವೆಗೈಯುವ ಶೂದ್ರರ ಕಾಯಕವಿದೆ. ಇದರ ಶ್ರೇಣಿಯು ಕೆಳಮಟ್ಟದ್ದಾಗಿದೆ.

ಅಷ್ಟಾಗಿ ಹೆಚ್ಚು ಪರಿಚಿತವಲ್ಲದ ಸಿದ್ಧಾಂತವೆಂದರೆ ವರ್ಣದ ಉಗಮವನ್ನು ಕುರಿತ ತ್ರಿಗುಣ ಸಿದ್ಧಾಂತ. ಪ್ರಾಚೀನ ಭಾರತದ ದಾರ್ಶನಿಕ ಚಿಂತನೆಯು ಮೂರು ಗುಣಗಳನ್ನು ಅಂದರೆ, ಅಂತರ್ಗತ ಸ್ವಭಾವಗಳನ್ನು, ಮನುಷ್ಯರಲ್ಲಿ, ಜೀವಿ, ನಿರ್ಜೀವಿಗಳಲ್ಲಿ, ಹಾಗೂ ಮನುಷ್ಯನ ಕ್ರಿಯೆಗಳಲ್ಲಿ ಗುರುತಿಸಿತ್ತು. ಅವುಗಳೆಂದರೆ: ಸತ್ತ್ವ, ರಜಸ್ಸು ಮತ್ತು ತಮಸ್ಸು. ಸತ್ತ್ವವು ಉತ್ತಮ ಆಲೋಚನೆಗಳು ಮತ್ತು ಕ್ರಿಯೆಗಳು, ಔದಾರ್ಯ ಹಾಗೂ ಸದ್ಗುಣ, ಸತ್ಯ ಮತ್ತು ವಿವೇಕಕ್ಕೆ ಸಂಬಂಧಿಸಿದ್ದಾಗಿದೆ. ಮತ್ತೊಂದೆಡೆ, ರಜಸ್ಸು, ಉನ್ನತ ಜೀವನಶೈಲಿ ಮತ್ತು ವಿಲಾಸ, ಭಾವತೀವ್ರತೆ ಮತ್ತು ಕೆಲಮಟ್ಟಿಗಿನ ಲೋಲುಪತೆ, ಗರ್ವ, ಮತ್ತು ಶೌರ್ಯಗಳಿಂದ ರೂಪುಪಡೆದಿರುವಂತಹದ್ದು. ಇನ್ನು ಅಂತ್ಯದಲ್ಲಿರುವುದು ತಮಸ್ಸು. ಇದು ಒರಟುತನ, ಮಂಕಾಗಿರುವಿಕೆ, ಅಭಿರುಚಿರಹಿತ ಅತೀವ ಲೋಲುಪತೆ, ಹೆಚ್ಚಿನ ಕಾಲ್ಪನಿಕತೆ ಇಲ್ಲದೆ ಅತಿಹೆಚ್ಚು ಕೆಲಸಮಾಡುವ ಸಾಮರ್ಥ್ಯದಂತಹ ಗುಣಗಳನ್ನು ಪ್ರತಿನಿಧಿಸುತ್ತದೆ. ಸಾತ್ವಿಕ ಗುಣಗಳುಳ್ಳವರನ್ನು ಬ್ರಾಹ್ಮಣರೆಂದು ವರ್ಗೀಕರಿಸಿದ್ದರೆ, ರಾಜಸಿಕ ಗುಣವುಳ್ಳವರನ್ನು ಕ್ಷತ್ರಿಯ ಮತ್ತು ವೈಶ್ಯರೆಂದೂ, ತಾಮಸಿಕ ಗುಣವುಳ್ಳವರನ್ನು ಶೂದ್ರರೆಂದೂ ವಿಂಗಡಿಸಲಾಗಿದೆ. ನಾಲ್ಕು ವರ್ಣಗಳಲ್ಲಿ ಈ ಗುಣಸ್ವಭಾವವನ್ನು ನಾವು ಕಾಣಬಹುದಾದರೂ, ಒಂದು ಇಡೀ ಜನಸಮೂಹವನ್ನು ಹೇಗೆ ಈ ರೀತಿಯ ವರ್ಗೀಕರಣಕ್ಕೆ ಒಳಪಡಿಸಬಹುದು ಎಂದು ಊಹಿಸುವುದು ಕಷ್ಟವಾಗುತ್ತದೆ.

ಮೂರನೆಯ ಸಿದ್ಧಾಂತವು ಜನಾಂಗೀಯ ಮಿಶ್ರಣ, ಸಾಂಸ್ಕೃತಿಕ ಮುಖಾಮುಖಿ ಮತ್ತು ಕಾರ್ಯಾತ್ಮಕ ವಿಶೇಷಜ್ಞತೆಗಳನ್ನು ಪರಿಗಣನೆಗೆ ತೆಗೆದುಕೊಳ್ಳುತ್ತದೆ. ಈ ಮೂರರಲ್ಲಿನ ಯಾವುದೇ ಒಂದು ಅಂಶವು ವರ್ಣದ ಉಗಮವನ್ನು ಏಕಾಂಗಿಯಾಗಿ ವಿವರಿಸಲಾಗದು. ಹಿಂದೂ ಸಮಾಜದ ವಿಕಸನದ ಆರಂಭಿಕ ಘಟ್ಟದಲ್ಲಿ, ಅಂದರೆ ವೇದಕಾಲೀನ ಸಂದರ್ಭದಲ್ಲಿ, ಜನಾಂಗೀಯತೆ ಮತ್ತು ಮೈಬಣ್ಣಗಳೆರಡೂ ಪ್ರಮುಖ ಅಂಶಗಳಾಗಿದ್ದವು. ಆದರೆ, ಅದರ ಪೂರ್ಣ ವಿಕಸಿತ ರೂಪದಲ್ಲಿ ಅದೊಂದು ಸೋಗಿನ ವಿದ್ಯಮಾನ ಮಾತ್ರ ಆಯಿತೇ ಹೊರತು, ಜೈವಿಕ ಸತ್ಯವಾಗಲಿಲ್ಲ. ಆರ್ಯೀಕರಣವೆನ್ನುವುದು ಸಾಂಸ್ಕೃತಿಕ ಮುಖಾಮುಖಿಯ ಫಲಿತಾಂಶವಾಗಿತ್ತಾದರೂ, ಅದು ದಾನಿ ಮತ್ತು ಸ್ವೀಕೃತರ ಸಂಬಂಧಗಳ ಏಕಮುಖ ಪ್ರಕ್ರಿಯೆಯಾಗಿರಲಿಲ್ಲ. ಈ ಹಿಂದೆ ತಿಳಿಸಿದಂತೆ, ಆರ್ಯ-ಪೂರ್ವ ಪರಂಪರೆಯಾದ ವ್ರಾತ್ಯವು ದೃಢವಾಗಿ ಹೊರಹೊಮ್ಮುವ ಮೂಲಕ ಆರ್ಯರು ರೂಪಿಸಿದ್ದ ಸಾಮಾಜಿಕ ಸಂಘಟನೆ, ಆಚರಣೆ, ನಂಬಿಕೆ, ಲೋಕದೃಷ್ಟಿ ಮತ್ತು ಅದರ ಗುಣಲಕ್ಷಣಗಳನ್ನು ಬದಲಿಸಿತು. ಹೊಸದಾಗಿ ಉದ್ಭವಿಸುತ್ತಿದ್ದ ಸಾಮಾಜಿಕ ಶ್ರೇಣೀಕರಣದೊಳಗೆ ಸಮೂಹಗಳನ್ನು ಇಡಿಯಾಗಿ ಒಳಗೊಳ್ಳಲಾಯಿತು. ಆ ಮೂಲಕ ಕೆಲವೊಂದು ಹೊಸ ಗುಣಲಕ್ಷಣಗಳಿಗೆ ಹೊಂದಿಕೊಳ್ಳುವ, ಕೆಲವೊಂದು ಹಳೆಯ ಸ್ವರೂಪಗಳನ್ನು ಹಾಗೆಯೇ ಉಳಿಸಿಕೊಳ್ಳುವ, ಮತ್ತು ಅವುಗಳ ಗುರುತನ್ನು ವಿಸ್ತೃತ ಸಮಾಜದ ಮೇಲೆ ಮೂಡಿಸುವ ಕೆಲಸವಾಯಿತು. ಈ ವೇಳೆಗಾಗಲೇ ಕಾರ್ಯಾತ್ಮಕ ವೈಶಿಷ್ಟ್ಯತೆ ಹೊಂದಿದ್ದ ಸಮೂಹಗಳು ಅಸ್ತಿತ್ವದಲ್ಲಿದ್ದವು; ಅವುಗಳನ್ನು ಹೊಸ ಸಮಾಜದೊಳಗೆ ಸೂಕ್ತ ಸಾಮಾಜಿಕ ಸ್ಥಾನಮಾನ ಮತ್ತು ಆಚರಣಾ ದರ್ಜೆಯ (ರಿಚುಯಲ್ ಸ್ಟೇಟಸ್) ಮೂಲಕ ಒಳಪಡಿಸಿಕೊಳ್ಳಲಾಯಿತು.

## ಜಾತಿ

"ಜಾತಿ", ಎನ್ನುವುದು ಗೊಂದಲಕಾರಿಯಾದ ಪದ; ವಿಭಿನ್ನ ಸಂದರ್ಭಗಳಲ್ಲಿ ಅದನ್ನು ವಿಭಿನ್ನ ಅರ್ಥಗಳನ್ನು ಧ್ವನಿಸಲು ಹಾಗೂ ಸಾಮಾಜಿಕ ವರ್ಗೀಕರಣವನ್ನು ಸೂಚಿಸಲು ಬಳಸಲಾಗುತ್ತದೆ. ಜಾತಿಯನ್ನು ಹೆಚ್ಚು ಕಡಿಮೆ ಒಂದು ನಿರ್ದಿಷ್ಟ ಆಚರಣಾ ದರ್ಜೆಯುಳ್ಳ, ಹಾಗೂ ಪಾರಂಪರಿಕವಾಗಿ ಒಂದು ವೃತ್ತಿಯೊಂದಿಗೆ ಸಂಬಂಧ ಹೊಂದಿರುವ ಅಂತರವಿವಾಹ ಸಮುದಾಯವನ್ನು (ಎಂಡೋಗಮಸ್ ಕಮ್ಯುನಿಟಿ) ಸೂಚಿಸಲು ಬಳಸುವುದು ಉತ್ತಮ. ಎರಡು ಎಚ್ಚರಿಕೆಗಳು ಇಲ್ಲಿ ಅಗತ್ಯ. ಮೊದಲನೆಯದು, ಮೂರು ಉನ್ನತ ವರ್ಣಗಳನ್ನು ಅವುಗಳ ಸಾಮಾನ್ಯ ಹೆಸರಿನಲ್ಲಿ ಗುರುತಿಸಬಹುದಾದರೂ ನಿಜವಾದ ಜಾತಿಗಳು ಅವುಗಳ ಉಪ ವಿಭಾಗಗಳಾಗಿವೆ. ಎರಡನೆಯದು, ಕೆಲವೊಂದು ಜಾತಿ ಸಮೂಹಗಳು ಒಂದು ಸಾಮಾನ್ಯ ಹೆಸರನ್ನು ಹೊಂದಿವೆ,

ನಿಜವಾದ ಜಾತಿಗಳು ಈ ಸಾಮಾನ್ಯ ಹೆಸರಿನ ಮುಂದೆ ಅಥವಾ ಹಿಂದೆ ಸೂಚಿತವಾಗಿರುತ್ತವೆ. ಉತ್ತರ ಭಾರತದ ಬ್ರಾಹ್ಮಣರು ಹಲವು ಅಂತರವಿವಾಹ ಜಾತಿಗಳಾಗಿ ವಿಭಾಗಿಸಲ್ಪಟ್ಟಿದ್ದಾರೆ, ಉದಾಹರಣೆಗೆ: ಕನ್ಯಾಕುಬ್ಜ, ಸರಯುಪರೀನ್, ಗೌರ್ ಇತ್ಯಾದಿ. ಮಹಾರಾಷ್ಟ್ರದಲ್ಲಿ, ದೇಶಸ್ಥ್, ಕೊಂಕಣಸ್ಥ್, ಕರ್ಹಡೆ ಮತ್ತು ಸಾರಸ್ವತ ಎನ್ನುವ ವಿಭಾಗಗಳಿವೆ. ತಮಿಳುನಾಡಿನಲ್ಲಿ ಅವರ ಪ್ರಮುಖ ವಿಭಾಗಗಳು ಐಯ್ಯಂಗಾರ್ ಮತ್ತು ಅಯ್ಯರ್. ಈ ಜಾತಿಗಳು ಸಹ ತಮ್ಮದೇ ಆದ ವೈಯಕ್ತಿಕ ಅಸ್ಮಿತೆಯನ್ನು ಹೊಂದಿರುವ ಹಲವು ವಿಂಗಡಿಸಲ್ಪಟ್ಟ ಸಮೂಹಗಳನ್ನು ಹೊಂದಿವೆ. ಇಂತಹ ಗುಂಪುಗಳು ಹಲವು ವಿಧಗಳನ್ನು ಹೊಂದಿರಬಹುದು. ಉದಾಹರಣೆಗೆ, ಕನ್ಯಾಕುಬ್ಜವನ್ನು ಜನ್ಮಜಾತ ಗುಣವಿಶೇಷಗಳನ್ನು ಆಧರಿಸಿ ಇಪ್ಪತ್ತು ಅಂಶಗಳ ಪರಿಮಾಣದಲ್ಲಿ ಬಿಸ್ವಾಸ್‌ಗಳಾಗಿ ವಿಂಗಡಿಸಲಾಗಿದೆ. ಹೆಚ್ಚಿನ ಸಂಖ್ಯೆಯ ಬಿಸ್ವಾಸ್‌ಗಳನ್ನು ಹೊಂದಿರುವ ವಿಭಾಗವು ಹೆಚ್ಚು ಉನ್ನತ ಸ್ಥಾನವನ್ನು ಹೊಂದಿರುತ್ತದೆ. ಬಿಸ್ವಾ ಎಂದರೆ ಇಪ್ಪತ್ತು ; ಎಲ್ಲ ಇಪ್ಪತ್ತು ಬಿಸ್ವಾಸ್‌ಗಳನ್ನು ಹೊಂದಿರುವ ವಿಭಾಗವು ಅತ್ಯಂತ ಉನ್ನತ ಸ್ಥಾನವನ್ನು ಹೊಂದಿರುತ್ತದೆ. ಉಳಿದವರು ಬಿಸ್ವಾಸ್‌ಗಳ ಸಂಖ್ಯೆಗೆ ಅನುಗುಣವಾಗಿ ಅವರೋಹಣ ಕ್ರಮದಲ್ಲಿ ಸ್ಥಾನವನ್ನು ಪಡೆಯುತ್ತಾರೆ. ಇಪ್ಪತ್ತು ಅಥವಾ ಹದಿನೆಂಟು ಸಂಖ್ಯೆಯ ಬಿಸ್ವಾಸ್‌ಗಳನ್ನು ಹೊಂದಿರುವವರಲ್ಲಿ ಆ ಕುರಿತ ವಿಶೇಷ ಹೆಮ್ಮೆ ಈಗಲೂ ಕಂಡುಬರುತ್ತದೆಯೆಂಬುದು ಆಶ್ಚರ್ಯಕರವಾದುದು. ಇನ್ನು ಸರಯುಪರೀನ್ ಬ್ರಾಹ್ಮಣರಲ್ಲಿ ಅವರ ಆಚಾರಗಳ ಪರಿಶುದ್ಧತೆಯ ಮಟ್ಟದ ಆಧಾರದಲ್ಲಿ ವಿಭಾಗೀಕರಣಗಳು ಇವೆ. ಇವರಲ್ಲಿ ಉನ್ನತ ಸ್ಥಾನವು ಅತಿ ಹೆಚ್ಚು ಪಾವಿತ್ರ್ಯ ಹೊಂದಿದೆಯೆಂದು ಭಾವಿಸಲಾಗಿರುವ ವಂಶ ಶಾಖೆಯಾದ ಪಂಕಿತ್ ಪವನ್ ಸಮೂಹದ್ದು. ಈ ಮಂದಿಯು ಊಟಮಾಡುವಾಗ ಪ್ರತ್ಯೇಕವಾಗಿ ಕೂರುತ್ತಾರೆ; ಇವರಿಗಿಂತ ಕಡಿಮೆ ಪರಿಶುದ್ಧತೆಯವರು, ಸರಯುಪರೀನ್ ಸಮೂಹದವರೇ ಆಗಿದ್ದರೂ ಅವರೊಟ್ಟಿಗೆ ಕೂರುವಂತಿಲ್ಲ. ಈ ರೀತಿ ಅಳವಡಿಸಿಕೊಂಡಿದ್ದ ಆಚರಣೆಗಳ ಕಠಿಣ ಮಾನದಂಡಗಳನ್ನು ಯುವಪೀಳಿಗೆಗೆ ಪಾಲಿಸುವುದು ಕಷ್ಟಸಾಧ್ಯವಾದರೂ, ಅವರಲ್ಲಿನ ಒಂದು ಸಮೂಹ ತಮ್ಮ ಆಚಾರಗಳ ಉನ್ನತ ಸ್ಥಾನಮಾನದ ಬಗ್ಗೆ ಇಂದಿಗೂ ಸವಿಯಾದ ನೆನಪುಗಳನ್ನು ಹೊಂದಿದೆ. ಉನ್ನತ ಸ್ಥಾನವನ್ನು ಹೊಂದಿರುವ ಸಮೂಹಗಳಿಗೆ ತಮಗಿಂತ ಕೆಳಗಿರುವ ಸಮೂಹಗಳೊಂದಿಗಿನ ಅನುಲೋಮ (ಹೈಪರ್ಗಮಸ್) ವಿವಾಹಕ್ಕೆ ಅವಕಾಶವಿದೆ; ಇವರು ತಮ್ಮ ಹೆಣ್ಣು ಮಕ್ಕಳನ್ನು ಕೆಳಗಿನ ಸಮೂಹಗಳಿಗೆ ನೀಡುವುದಿಲ್ಲ, ಬದಲಿಗೆ ತಮ್ಮದೇ ಸರಿಸಮನಾದ ಕುಟುಂಬಗಳಲ್ಲಿ ವಧುಗಳು ದೊರೆಯದಿದ್ದಲ್ಲಿ, ಕೆಳಗಿನ ಸಮೂಹಗಳ ಹೆಣ್ಣುಮಕ್ಕಳನ್ನು ಒಪ್ಪಿಕೊಳ್ಳುತ್ತಾರೆ. ದ್ವಿಜರಲ್ಲದ ಕೆಲವೊಂದು ಜಾತಿಸಮೂಹಗಳಲ್ಲಿಯೂ ಸಹ, ಸಮೂಹವು ಸಜಾತೀಯ ವಿವಾಹವುಳ್ಳ ಹಲವು ಪ್ರತ್ಯೇಕ ಜಾತಿಗಳಿಂದ ರೂಪುಗೊಂಡಿದ್ದಾಗ್ಯೂ, ಜಾತಿವಾಚಕ ಹೆಸರನ್ನು ಹೊಂದಿದೆ. ಹೊರಗಿನವರು ಇವುಗಳನ್ನು ಸರಿಸಮನಾದ ಸ್ಥಾನಮಾನವುಳ್ಳ ಒಂದು ಘಟಕವಾಗಿ ಪರಿಗಣಿಸುತ್ತಾರಾದರೂ ಆಂತರಿಕವಾಗಿ ಸಜಾತಿ ವಿವಾಹದ ಎಲ್ಲೆಗಳು (ಬೌಂಡರಿ) ಸ್ಪಷ್ಟವಾಗಿ ಗುರುತಿಸಲ್ಪಟ್ಟಿದ್ದು, ಜಾತಿ ಸಮೂಹದೊಳಗಿನ ಘಟಕಗಳ ನಡುವೆ ಸ್ಥಾನಮಾನಗಳ ಸೂಕ್ಷ್ಮ ವ್ಯತ್ಯಾಸವಿರುತ್ತದೆ. ದಕ್ಷಿಣದ ನೀಲಗಿರಿ ಬೆಟ್ಟಗಳಲ್ಲಿನ ಬಡಗ ಸಮುದಾಯವು ಹೀಗೆ ಒಂದು ಸಾಮಾನ್ಯ ಹೆಸರನ್ನು ಹೊಂದಿದ್ದರೂ ಅವರು ಸಜಾತಿ ವಿವಾಹವಿರುವ ಅನೇಕ ಜಾತಿಗಳಾಗಿ ವಿಭಾಗಿಸಲ್ಪಟ್ಟಿದ್ದು ಪ್ರತಿಯೊಂದೂ ಪ್ರತ್ಯೇಕ ಅಸ್ಮಿತೆ ಹಾಗೂ ಹೆಸರನ್ನು ಹೊಂದಿವೆ. ಮಹಾರಾಷ್ಟ್ರದ ಕುಣಬಿ ಹಾಗೂ ಗುಜರಾತ್‌ನ ಪಾಟಿದಾರ್ ಮತ್ತು ಬಾರಿಯಾ ಸಮೂಹಗಳಿಗೂ ಇದು ಅನ್ವಯವಾಗುತ್ತದೆ. ಮಧ್ಯಪ್ರದೇಶದ ಛತ್ತೀಸ್‌ಗಢ ಪ್ರಾಂತ್ಯದ ಗೋಸಾಕಣೆ ಮಾಡುವ ಹಾಗೂ ನೀರು ಸರಬರಾಜು ಮಾಡುವ ಸಮುದಾಯಗಳನ್ನು ರಾವತ್ ಎಂದು ಕರೆಯಲಾಗುತ್ತದೆ. ಆದರೆ, ಇದು ಕನ್ನೋಜಿಯಾ, ಜಹೆರಿಯಾ, ಕೊಸಾರಿಯಾ, ಒರಿಯಾ ಇನ್ನು ಮುಂತಾದ ಹಲವು ಸಜಾತೀಯ ವಿವಾಹದ ಜಾತಿಗಳನ್ನು ಹೊಂದಿದೆ. ಇದೇ ರೀತಿ, ಕ್ಷೌರಿಕರು, ಅಗಸರು, ಆಚಾರಿಗಳು (ಚಿನ್ನ ಬೆಳ್ಳಿ ಕೆಲಸ ಮಾಡುವವರು), ಕಮ್ಮಾರರು, ಕುಂಬಾರರು ಹೀಗೆ ಹಲವು ಜಾತಿ ಸಮೂಹಗಳು ತಮ್ಮೊಳಗೆ ಅನೇಕ ಸಜಾತೀಯ ವಿವಾಹದ ಜಾತಿಗಳನ್ನು ಹೊಂದಿವೆ.

ಈ ಸರಳ ಸಂಗತಿಗಳೇ ಗೊಂದಲಕಾರಿಯಾಗಿ ಗೋಚರಿಸುತ್ತಿರುವಾಗ ಸಾಮಾಜಿಕ ವಾಸ್ತವವು ಮತ್ತೂ ಎಲ್ಲೆಯಿಲ್ಲದಷ್ಟು ಸಂಕೀರ್ಣವಾಗಿದೆ. ಅದು ಹಾಗಿರುವುದು ಅನಿವಾರ್ಯ ಅಗತ್ಯವಾಗಿದೆ. ವಿವಿಧ ಘಟಕಗಳು ಮತ್ತು ವಿಭಾಗಗಳನ್ನು ಒಳಗೊಳ್ಳುವ ಹಾಗೂ ಒಂದು ಸ್ಥಿರ ಮತ್ತು ತರ್ಕಬದ್ಧವಾದ ವ್ಯವಸ್ಥೆಯನ್ನು ನೀಡುವಂತಹ ಅಚ್ಚುಕಟ್ಟಾದ ರಾಚನಿಕ ಮಾದರಿ ವ್ಯವಸ್ಥೆಯೊಳಗೆ ನಿಜಕ್ಕೂ ವಿಭಿನ್ನ ಪ್ರಾದೇಶಿಕ ಸನ್ನಿವೇಶಗಳಲ್ಲಿನ ವೈವಿಧ್ಯಮಯವಾದ ಸಮೂಹಗಳು ಮತ್ತು ವ್ಯವಸ್ಥೆಯನ್ನು ಒಟ್ಟುಮಾಡುವುದು

ಕಷ್ಟಸಾಧ್ಯವೇ ಸರಿ. ಹಾಗಾಗಿ, ನಾವು ಈ ವ್ಯವಸ್ಥೆಯ ಪರಿಕಲ್ಪನೆಯನ್ನು ಮೂರು ಹಂತಗಳಲ್ಲಿ ಮಾಡಬೇಕಾಗುತ್ತದೆ: ಮೇಲಿನ ಹಂತದಲ್ಲಿ, ಅನುವಂಶಿಕವಾಗಿರುವ ಹಾಗೂ ಹೆಚ್ಚುಕಡಿಮೆ ಒಂದೇ ರೀತಿಯ ಆಚರಣೆಗಳ ಸ್ಥಾನಮಾನವನ್ನು ಹೊಂದಿರುವಂತಹ ನಾಲ್ಕು ಗುರುತಿಸಲ್ಪಟ್ಟಿರುವ (ಹಾಗೂ ಒಂದು ಗುರುತಿಸದೆ ಉಳಿದಿರುವ) ವರ್ಣಗಳು ಇರಲಿವೆ; ಮಧ್ಯದಲ್ಲಿ ಸಾಮಾನ್ಯ ಹೆಸರುಳ್ಳ, ಆದರೆ ವಿವಿಧ ಸಜಾತೀಯ ವೈವಾಹಿಕ ಆಚರಣೆ ಹೊಂದಿರುವಂತಹ, ಜಾತಿಗಳಾಗಿ ಉಪ ವಿಭಾಗಿಸಲ್ಪಟ್ಟಿರುವ ಜಾತೀಯ ಸಮೂಹಗಳು ಇರಲಿವೆ; ಕೆಳಗಿನ ಹಂತದಲ್ಲಿ ಸಜಾತೀಯ ವೈವಾಹಿಕ ಆಚರಣೆಯಿರುವ ಜಾತಿಗಳಿರಲಿದ್ದು, ಇವು ಮೇಲಿನ ಹಾಗೂ ಮಧ್ಯದ ಹಂತದ ರೀತಿಯಲ್ಲಿ ಕೇವಲ ವರ್ಗೀಕರಣ ಮತ್ತು ಆಚರಣೆಗಳ ಸ್ಥಾನಮಾನದ ಸೂಚಕ ಮಾತ್ರವೇ ಆಗಿರದೆ, ಸಾಮಾಜಿಕ ವ್ಯವಸ್ಥೆಯೊಳಗಿನ ಪರಿಣಾಮಕಾರಿ, ಕಾರ್ಯನಿರತ ಘಟಕಗಳಾಗಿವೆ.

ಈಗ ನಾವು ಜಾತಿಯ ಕುರಿತಾದ ಕೆಲವೊಂದು ಪ್ರಮುಖ ಗುಣವಿಶೇಷಗಳನ್ನು ಪರಿಶೀಲಿಸಲು ಮುಂದಾಗಬಹುದು:

1. ಜಾತಿಗಳು ಸಜಾತೀಯ ವೈವಾಹಿಕ ಆಚರಣೆಯಿರುವ ಘಟಕಗಳಾಗಿವೆ.

2. ಅವುಗಳನ್ನು ಶ್ರೇಣೀಕರಣದ ಆಧಾರದಲ್ಲಿ ವಿಭಾಗಿಸಲಾಗಿದೆ.

3. ಅವುಗಳು ತಪ್ಪದೇ ಜಾತಿ-ಆಧಾರಿತ ವೃತ್ತಿಗಳನ್ನು ಹೊಂದಿವೆ.

4. ವಿವಿಧ ಘಟಕಗಳ ನಡುವಿನ ಬೇರೆಯುವಿಕೆಯು ಪರಿಶುದ್ಧತೆ ಮತ್ತು ಮೈಲಿಗೆಯನ್ನು ಆಧರಿಸಿರುತ್ತದೆ.

5. ಜಾತಿಯೊಂದರ ಸದಸ್ಯರು ಸಾಧಾರಣವಾಗಿ ಒಂದು ಸಾಮಾನ್ಯ ಸಂಸ್ಕೃತಿಯನ್ನು ಹಂಚಿಕೊಳ್ಳುತ್ತಾರೆ. ಅಂದರೆ, ಸಾಂಪ್ರದಾಯಿಕ ಆಲೋಚನೆ ಮತ್ತು ವರ್ತನೆಯ ಒಂದು ಜೀವನಶೈಲಿಯನ್ನು (ನಂಬಿಕೆಗಳು, ಮೌಲ್ಯಗಳು, ವರ್ತನಾ ನಿಯಮಾವಳಿಗಳು, ಆರ್ಥಿಕ, ಧಾರ್ಮಿಕ, ಸಾಮಾಜಿಕ ಮತ್ತು ರಾಜಕೀಯ ಸಂಘಟನೆಗಳು ಇನ್ನು ಮುಂತಾದವು) ಹೊಂದಿರುತ್ತಾರೆ. ಇದು ತಲೆಮಾರಿನಿಂದ ತಲೆಮಾರಿಗೆ ಕಲಿಕೆಯ ಮೂಲಕ ವರ್ಗಾಯಿಸಲ್ಪಡುತ್ತದೆಯೇ ಹೊರತು ಜೈವಿಕ ವಂಶಪಾರಂಪರ್ಯದಿಂದಲ್ಲ.

6. ಭಾರತ ದೇಶದ ಹಲವು ಭಾಗಗಳಲ್ಲಿ, ಜಾತಿಗಳು ಹಳ್ಳಿಗಳೊಳಗಿನ ಹಾಗೂ ಹಳ್ಳಿಗಳ ನಡುವಣ ಸಾಮಾಜಿಕ ನಿಯಂತ್ರಣ ಮತ್ತು ಸಂಘರ್ಷ ಪರಿಹಾರದ ಕ್ರಿಯಾವಿಧಿಗಳನ್ನು ಹೊಂದಿವೆ.

ಈ ಗುಣವಿಶೇಷಗಳು ವ್ಯಾಪಕವಾಗಿ ಹಾಗೂ ಸಾಮಾನ್ಯವಾಗಿ ಒಪ್ಪಿತವಾಗಿರುವಂತದ್ದು, ಆದರೆ, ಇವುಗಳಲ್ಲಿ ಪ್ರತಿಯೊಂದೂ ಸಹ ಸಮ್ಮತವಾದ ಒಂದಿಲ್ಲೊಂದು ಅಪವಾದವನ್ನು (ಎಕ್ಸೆಪ್ಷನ್) ಹೊಂದಿದೆ. ಜಾತಿ ಎನ್ನುವುದು ಸಜಾತೀಯ ವೈವಾಹಿಕ ಘಟಕವೇ ಆದರೂ, ಕೆಲವು ತಳಜಾತಿಗಳು ತಮ್ಮಲ್ಲಿ ಮದುವೆಯಾಗುವ ಪುರುಷ ಅಥವಾ ಮಹಿಳೆಯನ್ನು ಸ್ವೀಕರಿಸುತ್ತವೆ. ಇಂತಹ ಸಂಬಂಧದಿಂದ ಜನಿಸಿದ ಮಕ್ಕಳನ್ನು ಸಂಪೂರ್ಣವಾಗಿ ಜಾತಿಯೊಳಗೆ ಸ್ವೀಕರಿಸಲಾಗುತ್ತದೆ. ಕೆಲವೊಂದು ಮೇಲ್ಜಾತಿಗಳೂ ಸಹ ಅನ್ಯಜಾತೀಯ ಸಂಬಂಧಗಳಿಗೆ (ಹೈಪರ್ಗಮಸ್ ಯೂನಿಯನ್) ಅನುವುಮಾಡಿಕೊಡುತ್ತವೆ; ಸಮ್ಮತವಾದ, ತಮಗಿಂತ ಸ್ವಲ್ಪ ಕೆಳಗಿರುವ ಜಾತಿಗಳ ಪರಿಮಿತಿಯಲ್ಲಿನ ಮಹಿಳೆಯನ್ನು ಪುರುಷನು ಮದುವೆಯಾಗಬಹುದು. ಇವರ ಸಂತತಿಯು ಯಾವುದೇ ಕಳಂಕವನ್ನು ಹೊರುವುದಿಲ್ಲವಷ್ಟೇ ಅಲ್ಲದೆ, ಅದಕ್ಕೆ ಜಾತಿಯ ಸಂಪೂರ್ಣ ಸದಸ್ಯತ್ವವನ್ನು ನೀಡಲಾಗುತ್ತದೆ. ಶ್ರೇಣೀಕರಣ ಎನ್ನುವುದು ಪ್ರಮುಖ ಗುಣವಿಶೇಷವಾಗಿದೆ, ಆದರೆ, ಸ್ಥಾನಮಾನ ಹಾಗೂ ಶ್ರೇಣಿಗಳ ಸೂಚಕಗಳು ನಿರ್ದಿಷ್ಟವಾಗಿಲ್ಲ ಹಾಗೂ, ಸಮರ್ಪಕವಾಗಿ ವಿವರಿಸಲ್ಪಟ್ಟಿರುವುದಿಲ್ಲ.. ದ್ವಿಜರೆನಿಸುವ ಮೂರು ಹಂತಗಳಲ್ಲಿನ ಪ್ರತಿಯೊಂದು ಜಾತಿಯೂ ತಮ್ಮ ಉನ್ನತ ಸ್ಥಾನಮಾನದ ಹಕ್ಕು ಸಾಧಿಸುತ್ತವೆ ಮತ್ತು ಅದೇ ರೀತಿ ತಮ್ಮದೇ ಹಂತದಲ್ಲಿರುವ ಇತರೆ ಜಾತಿಗಳು ಹಕ್ಕು ಸಾಧಿಸಿದರೆ ಆ ಬಗ್ಗೆ ತಕರಾರು ಎತ್ತುತ್ತವೆ. ಇನ್ನು ಶೂದ್ರರ ನಾಲ್ಕನೆಯ ಹಂತದಲ್ಲಿಯಂತೂ ಈ ಗೊಂದಲ ಮತ್ತೂ ಹೆಚ್ಚಿದೆ. ಅನೇಕ ಜಾತಿಗಳು ತಮ್ಮ ಕಲ್ಪಿತ ಐತಿಹ್ಯವನ್ನು ಮರುಕಟ್ಟುವ ಮೂಲಕ ತಮಗೆ ನೀಡಲಾಗಿರುವ ಸ್ಥಾನಮಾನಕ್ಕಿಂತಲೂ ಉನ್ನತ ಆಚರಣಾ ಸ್ಥಾನಮಾನಕ್ಕೆ ಆಗ್ರಹಿಸುತ್ತವೆ. ಇವುಗಳಲ್ಲಿ ಕೆಲವೊಂದು ಧಾರ್ಮಿಕ ಸಂಸ್ಥೆಗಳು

ಅಥವಾ ಅಧಿಕಾರ ಕೇಂದ್ರಗಳು ಕೆಲ ಪರಿಗಣನೆಗಳಲ್ಲಿ ನೀಡಿರುವ ಜನಿವಾರವನ್ನು ಧರಿಸುವ ಹಕ್ಕನ್ನು ರಕ್ಷಿಸಿಕೊಳ್ಳುವ ಸಲುವಾಗಿ ನಡೆಯುವ ಸ್ಪರ್ಧೆಯೂ ಇದೆ. ಇನ್ನು ಕೆಲವೊಂದು ಅಸ್ಪೃಶ್ಯ ಜಾತಿಗಳಲ್ಲಿಯೇ ಅಸ್ಪೃಶ್ಯತೆಯ ಆಚರಣೆಗಳಿವೆ. ಆಂಧ್ರಪ್ರದೇಶದಲ್ಲಿ ಮಾಲಾಗಳು ತಮ್ಮನ್ನು ಮಾದಿಗರಿಗಿಂತಲೂ ಶ್ರೇಷ್ಠರು ಎಂದು ಭಾವಿಸುತ್ತಾರೆ. ಮಹಾರಾಷ್ಟ್ರದಲ್ಲಿಯೂ ಸಹ ಮಹರ್‌ಗಳು ತಮ್ಮನ್ನು ಧೇಡ್, ಮಾಂಗ್ ಮುಂತಾದ ದಲಿತ ಸಮೂಹಗಳಿಗಿಂತ ಶ್ರೇಷ್ಠರು ಎಂದು ಭಾವಿಸುತ್ತಾರೆ. ಉತ್ತರ ಪ್ರದೇಶ ಹಾಗೂ ಬಿಹಾರದಲ್ಲಿ ಚಮ್ಮಾರರು ಪರಿಶಿಷ್ಟ ಜಾತಿಗಳಲ್ಲಿಯೇ ಮೇಲ್ಜಾತಿಯವರಾಗಿದ್ದಾರೆ.

ಕೊಡಮಾಡಲಾಗಿರುವ ಶ್ರೇಣಿ ಮತ್ತು ಉದ್ಯೋಗ ಎನ್ನುವುದು ಒಂದಕ್ಕೊಂದು ಅಂತರ್‌ಸಂಬಂಧ ಹೊಂದಿರುವಂತಹವಾಗಿವೆ. ವರ್ಣಗಳ ವಿವಿಧ ಹಂತಗಳ ನಡುವೆ ಹಾಗೂ ಒಂದೇ ವರ್ಣದೊಳಗಿನ ಅಥವಾ ಹೊರಗಿನ ಬಹುತೇಕ ಜಾತಿಗಳ ನಡುವೆ ಆಚಾರಗಳಲ್ಲಿ ಹಾಗೂ ಸಾಮಾಜಿಕವಾಗಿ ಅಂತರವಿದೆ. ಒಂದು ರೀತಿಯ ಪ್ರಾಥಮಿಕ ಸಂಸ್ಕಾರ ಪರಿಶುದ್ಧತೆಯು (ರಿಚುವಲ್ ಪ್ಯೂರಿಟಿ) ವ್ಯಕ್ತಿಯ ಹುಟ್ಟಿನ ಆಕಸ್ಮಿಕತೆಯಿಂದಲೇ ಆತನಿಗೆ ನೀಡಲ್ಪಡುತ್ತದೆ. ಸಾಮಾನ್ಯ ನಿಯಮದನ್ವಯ ಹೇಳುವುದಾದರೆ, "ಶುದ್ಧ" ಹಾಗೂ "ಶ್ರೇಷ್ಠ" ವೃತ್ತಿಯು ಜಾತಿಯೊಂದಕ್ಕೆ ಉನ್ನತ ಸಂಸ್ಕಾರವನ್ನು ಮತ್ತು ಸಾಮಾಜಿಕ ಸ್ಥಾನಮಾನವನ್ನು ನೀಡುತ್ತದೆ. ಅದೇ ರೀತಿ, "ಅಶುದ್ಧ" ಹಾಗೂ "ಮೈಲಿಗೆ" ಉಂಟುಮಾಡುವ ವೃತ್ತಿಯು ಅದನ್ನು ಕೆಳಗಿನ ಸ್ಥಾನಮಾನಕ್ಕೆ ದೂಡುತ್ತದೆ. ಕಲಿಕೆ, ಜ್ಞಾನವನ್ನು ತಿಳಿಹೇಳುವುದು ಮತ್ತು ಪೌರೋಹಿತ್ಯದ ಕಾರ್ಯಗಳು "ಶುದ್ಧ" ಹಾಗೂ "ಶ್ರೇಷ್ಠ"ವಾಗಿರುವಂತಹವು. ಹಾಗಾಗಿ, ಅವು ಬ್ರಾಹ್ಮಣರಿಗೆ ಅತ್ಯುನ್ನತ ಸ್ಥಾನವನ್ನು ಕಲ್ಪಿಸಲು ಕಾರಣವಾಗಿವೆ. ಚರ್ಮ ಆಧಾರಿತ ಕೆಲಸ ಮಾಡುವುದು ಅಥವಾ ಮಲಿನವನ್ನು ಸ್ವಚ್ಛಗೊಳಿಸುವ (ಮನುಷ್ಯನ ಮಲವೂ ಸೇರಿದಂತೆ) ಕೆಲಸವನ್ನು "ಅಶುದ್ಧ" ಹಾಗೂ "ಮೈಲಿಗೆ" ಎನ್ನಲಾಗುತ್ತದೆ; ಹಾಗಾಗಿ, ಅದನ್ನು ಮಾಡುವ ಜಾತಿಗಳು ಕನಿಷ್ಠ ಸ್ಥಾನಮಾನವನ್ನು ಪಡೆಯುತ್ತವೆ. ಜಾತಿಯೊಳಗಿನ ಹಾಗೂ ಹೊರಗಿನ ಒಡನಾಟದಲ್ಲಿ, ನಡಾವಳಿಗಳಲ್ಲಿ, ಶುದ್ಧ, ಅಶುದ್ಧ ಹಾಗೂ ಮಡಿ ಮತ್ತು ಮೈಲಿಗೆಯ ಕಲ್ಪನೆಗಳು ಪ್ರವೇಶಿಸುತ್ತವೆ. ಇವು ಹಿಂದೂ ಮನಸ್ಥಿತಿಯ ಒಂದು ಭಾಗವಾಗಿವೆ. ಆದರೆ, ಪರಿಸ್ಥಿತಿಗಳು ಬದಲಾಗುತ್ತಿವೆ, ಸಮಕಾಲೀನ ವಾಸ್ತವವು ಪರಂಪರೆಯಿಂದ ದೂರ ಸರಿಯುತ್ತಿದೆ.

ಈ ಸಂದರ್ಭದಲ್ಲಿ ಮತ್ತೊಂದು ಸಾಮಾನ್ಯ ಪ್ರತಿಪಾದನೆಯನ್ನು ಮಾಡಬಹುದು: ಜಾತಿಯ ಸ್ಥಾನಮಾನ ಉನ್ನತವಾಗಿದ್ದಷ್ಟೂ, "ಶುದ್ಧತೆ"ಯನ್ನು ಕಾಪಾಡಿಕೊಳ್ಳುವ ಹಾಗೂ "ಮೈಲಿಗೆ"ಯಿಂದ ದೂರವಿರುವ ನಿಯಮಾವಳಿಗಳು ಹೆಚ್ಚು ಸಂಕೀರ್ಣವೂ, ವಿಸ್ತೃತವೂ ಆಗಿರುತ್ತವೆ. ಅಂತರ್ಜಾತೀಯ "ಮೈಲಿಗೆ"ಯ ವಿಚಾರವನ್ನು ಗಮನಿಸುವುದಾದರೆ, "ಮೈಲಿಗೆ"ಯು ಆಹಾರ ಮತ್ತು ವೈಯಕ್ತಿಕ ಸಂಪರ್ಕದಿಂದ ಉಂಟಾಗುತ್ತದೆ ಎನ್ನುವುದನ್ನು ಗಮನಿಸುವುದು ಅವಶ್ಯ. ಆಹಾರದ ವಿಚಾರದಲ್ಲಿ ಈ ವಿಷಯವಾಗಿ ಕೇಳಲಾಗುವ ಪ್ರಶ್ನೆಗಳೆಂದರೆ: ಯಾವ ಆಹಾರ? ಯಾರಿಂದ ಮಾಡಲ್ಪಟ್ಟ ಆಹಾರ? ಯಾವ ಜಾತಿಯೊಟ್ಟಿಗೆ ಅದನ್ನು ತಿನ್ನುತ್ತೀರಿ? ಸಾತ್ವಿಕ ಆಹಾರ ಅಂದರೆ, ಹಣ್ಣು, ಹಾಲು, ಗೆಡ್ಡೆಗೆಣಸು ಮತ್ತು ಸಾಮಾನ್ಯವಾಗಿ ಸಸ್ಯಾಹಾರಗಳು, "ಶುದ್ಧತೆ"ಯ ವಿಚಾರದಲ್ಲಿ ಮೇಲಿನ ಸ್ಥಾನವನ್ನು ಪಡೆಯುತ್ತದೆ. ಬ್ರಾಹ್ಮಣನು ಕೂಡ ಜಾತಿಯಲ್ಲಿ ಅತ್ಯಂತ ಕೆಳಸ್ತರದಲ್ಲಿರುವವರು ತಂದ ಹಣ್ಣನ್ನು, ತುಲನಾತ್ಮಕವಾಗಿ ಮೇಲಿರುವ ಜಾತಿಯವರು ಸೇದಿ ತಂದ ನೀರಿನಲ್ಲಿ ತೊಳೆದು, ಸೂಕ್ತ ರೀತಿಯಲ್ಲಿ ಒಗೆದಿರುವ ಶುದ್ಧವಾದ ವಸ್ತ್ರದಿಂದ ಒರೆಸಿ ತಿನ್ನಬಹುದಾಗಿದೆ. ಹಾಲು ಮತ್ತು ಮೊಸರು ದ್ರವ ಪದಾರ್ಥಗಳಾದ ಕಾರಣ ಸುಲಭವಾಗಿ ಮೈಲಿಗೆಯಾಗಬಹುದಾದ ನೀರನ್ನು ಸೇರಿಸಲು ಸಾಧ್ಯವಿರುವುದರಿಂದ ಕೆಲವು ಸಮಸ್ಯೆಗಳನ್ನು ಒಡ್ಡುತ್ತವೆ. ಇದೇ ಕಾರಣಕ್ಕಾಗಿಯೇ ಬಹುತೇಕ ಹಳ್ಳಿಗಳಲ್ಲಿ ಶುದ್ಧ ಜಾತಿಗಳು ಮತ್ತು ಪರಿಶಿಷ್ಟ ಜಾತಿಗಳು ಬಳಸುವ ಬಾವಿಗಳು ಕೂಡ ಪ್ರತ್ಯೇಕವಾಗಿರುತ್ತವೆ. ಒಂದು ವೇಳೆ ಆ ಹಳ್ಳಿಯಲ್ಲಿ ಒಂದೇ ಬಾವಿ ಇದ್ದರೆ ಅದನ್ನು ಕೇವಲ "ಶುದ್ಧ" ಜಾತಿಗಳು ಮಾತ್ರವೇ ಬಳಸುತ್ತವೆ. ಅದರ ಬಳಕೆಗೆ ಪರಿಶಿಷ್ಟ ಜಾತಿಗಳಿಗೆ ಅವಕಾಶ ನೀಡುವುದಿಲ್ಲ. ಸಾಮಾನ್ಯವಾಗಿ, ನೀರನ್ನು ಸೇದುವವರು ನಾಲ್ಕನೇ ವರ್ಣಕ್ಕೆ ಸೇರಿದ್ದು, ಅವರು ಸೇದಿದ ನೀರು ಎಲ್ಲರಿಂದಲೂ ಸ್ವೀಕರಿಸಲ್ಪಡುತ್ತದೆ. ಆದರೆ, ಅತ್ಯಂತ ಕಠಿಣ ಶುದ್ಧತೆಯನ್ನು ಪಾಲಿಸುವವರು ಇದಕ್ಕೆ ಹೊರತಾಗಿರುತ್ತಾರೆ. ಅವರ ವಿಷಯದಲ್ಲಿ, ಅವರಿಗೆ ಸರಿಸಮನಾದ "ಶುದ್ಧ" ಸ್ಥಾನಮಾನ

ಹೊಂದಿರುವ ವ್ಯಕ್ತಿಯು ವೈಯಕ್ತಿಕವಾಗಿ ಸಂಸ್ಕಾರ "ಶುದ್ಧ" ಸ್ಥಿತಿಯಲ್ಲಿ ಸೇದಿದ ನೀರು ಮಾತ್ರವೇ ಸ್ವೀಕೃತವಾಗುತ್ತದೆ. ಆಹಾರದ ವಿಷಯದಲ್ಲಿ ರಾಜಸಿಕ ಮತ್ತು ತಾಮಸಿಕ ಆಹಾರಗಳ ನಡುವಿನ ವಿಭಾಗೀಕರಣ ಕಷ್ಟದ್ದಾಗಿದೆ. ಈ ವಿಚಾರವಾಗಿ ಅನೇಕ ಪ್ರಾದೇಶಿಕವಾದ ಅರ್ಥ ವಿಭಿನ್ನತೆಗಳಿದ್ದು, ಸಂಕೀರ್ಣವಾಗಿವೆ. ಜಿಂಕೆಯ ಮಾಂಸವನ್ನು ರಾಜಸಿಕ ಎನ್ನಲಾಗುತ್ತದೆ, ಅದೇ ರೀತಿ, "ಅಪರಿಶುದ್ಧ"ವೆಂದು ಪರಿಗಣಿತವಾಗದ ದ್ರಾಕ್ಷಿ ಹಾಗೂ ಹಣ್ಣುಗಳಿಂದ ಮಾಡಿದ ದ್ರಾಕ್ಷಾರಸಗಳು "ಅಪರಿಶುದ್ಧ"ವೇನೂ ಅಲ್ಲ. ಗಾಢವಾದ ಮತ್ತು ಕಟುವಾಸನೆಯ ತರಕಾರಿಗಳು - ಈರುಳ್ಳಿ ಮತ್ತು ಬೆಳ್ಳುಳ್ಳಿ - ತಾಮಸಿಕ, ಅದೇ ರೀತಿ ಎಮ್ಮೆ ಹಾಗೂ ಹಂದಿಯ ಮಾಂಸ ಕೂಡ. ಕಾಡು ಹಂದಿ ಮತ್ತು ಕೋಳಿಗಳು ಸಾಕಿದ ಪ್ರಭೇದಗಳಿಗಿಂತ ಪವಿತ್ರವೆನಿಸಿದ್ದವು. ಬ್ರಾಹ್ಮಣ ಮತ್ತು ವೈಶ್ಯ ಜಾತಿಗಳು ತಮ್ಮನ್ನು ಸಾತ್ವಿಕ ಆಹಾರಗಳಿಗೆ ಮಾತ್ರವೇ ಸೀಮಿತಗೊಳಿಸಿಕೊಳ್ಳುವುದನ್ನು ನಿರೀಕ್ಷಿಸಲಾಗಿದೆ. ಆದರೆ, ಅದರಲ್ಲಿಯೂ ಅಪವಾದಗಳಿವೆ. ಕಾಶ್ಮೀರಿ ಪಂಡಿತರು, ಮಹಾರಾಷ್ಟ್ರದ ಪಶ್ಚಿಮ ಕರಾವಳಿಯ ಸಾರಸ್ವತರು ಮತ್ತು ಬಂಗಾಳ ಮತ್ತು ಒರಿಸ್ಸಾದ ಬ್ರಾಹ್ಮಣರು ಮೀನು ಮತ್ತು ಮಾಂಸವನ್ನು ಸೇವಿಸುತ್ತಾರೆ. ಕ್ಷತ್ರಿಯರು ರಾಜಸಿಕ ಆಹಾರ ಸೇವನೆಗೆ, ಶೂದ್ರರು ತಾಮಸಿಕ ಆಹಾರ ಸೇವನೆಗೆ ಒಳಪಟ್ಟವರು. ಇವರಿಗಿಂತ ಕೆಳಗಿರುವವರು ನಿಷೇಧಿಸಲ್ಪಟ್ಟ ಕೆಲವು ಆಹಾರಗಳನ್ನೂ ಸಹ ತಿನ್ನಬಹುದಾಗಿದೆ. ಶುದ್ಧ ಜಾತಿಗಳಲ್ಲಿ ಕಚ್ಚಾ ಆಹಾರ ಮತ್ತು ಪಕ್ಕಾ ಆಹಾರಗಳ ನಡುವೆ ವ್ಯತ್ಯಾಸವನ್ನು ಮಾಡಲಾಗುತ್ತದೆ: ನೀರನ್ನು ಬಳಸಿ ಮಾಡುವ ಆಹಾರವು ಕಚ್ಚಾ ಆಹಾರವಾದರೆ, ಎಣ್ಣೆ, ತುಪ್ಪ ಅಥವಾ ಪರಿಶುದ್ಧ ಬೆಣ್ಣೆಯನ್ನು ಬಳಸಿ ಮಾಡುವ ಆಹಾರವು ಪಕ್ಕಾ ಆಹಾರವಾಗಿದೆ. ಈ ಕ್ರಮದಲ್ಲಿ ಎಲ್ಲಿ ದ್ರವದ ಅವಶ್ಯಕತೆ ಇದೆಯೋ (ಉದಾಹರಣೆಗೆ ಹಿಟ್ಟನ್ನು ಕಲೆಸುವ ಹಾಗೂ ನಾದುವ ಪ್ರಕ್ರಿಯೆ) ಅಲ್ಲಿ ನೀರಿನ ಬದಲಿಗೆ ಹಾಲನ್ನು ಬಳಸಲಾಗುತ್ತದೆ. ಅಕ್ಕಿಯ ಖೀರ್ ಅಥವಾ ಅಕ್ಕಿ ಪಾಯಸವನ್ನು ಮಾಡುವ ಸಂದರ್ಭದಲ್ಲಿ ಅಕ್ಕಿಯನ್ನು ತುಪ್ಪವನ್ನು ಬಳಸಿ ಸ್ವಲ್ಪವೇ ಹುರಿದು ನಂತರ ಹಾಲಿನಲ್ಲಿ ಕುದಿಸಿದರೆ ಆಗ ಅದು ಪರಿಶುದ್ಧವೆನಿಸುತ್ತದೆ. ನಿಯಮಾನುಸಾರ, ಕಚ್ಚಾ ಆಹಾರವನ್ನು ತಮ್ಮ ಜಾತಿಗಿಂತ ಮೇಲಿರುವ ಜಾತಿಗಳಿಂದ ಮಾತ್ರವೇ ಸ್ವೀಕರಿಸಬಹುದು, ಮತ್ತು ಕೆಲವು ಸಂದರ್ಭಗಳಲ್ಲಿ ಆಚಾರಗಳಲ್ಲಿ ಹೆಚ್ಚುಕಡಿಮೆ ತಮ್ಮ ಸ್ಥಾನಮಾನಕ್ಕೆ ಸರಿಸಮನಾಗಿರುವ ಜಾತಿಗಳಿಂದ ಸ್ವೀಕರಿಸಬಹುದು. ಪಕ್ಕಾ ಆಹಾರದ ವಿಚಾರದಲ್ಲಿ ಸಾಕಷ್ಟು ಕೆಳಗಿನ ಹಂತದವರೆಗೂ ಹೋಗಬಹುದು. ಆದರೆ, ಶುದ್ಧ ಜಾತಿಗಳು ಪಕ್ಕಾ ಆಹಾರವನ್ನೂ ಸಹ ಅಶುದ್ಧ ಶೂದ್ರ ಜಾತಿಗಳಾದ ಕ್ಷೌರಿಕ, ಅಗಸ, ಬುಟ್ಟಿ ಹೆಣೆಯುವವರು, ಮುಂತಾದ ಜಾತಿಗಳಿಂದ ಸ್ವೀಕರಿಸುವುದಿಲ್ಲ. ನಾಲ್ಕು ವರ್ಣಗಳಲ್ಲಿನ ಯಾವುದೇ ಜಾತಿಯೂ ಕೂಡ ಅಸ್ಪೃಶ್ಯರು ಎಂದು ಪಾರಂಪರಿಕವಾಗಿ ವರ್ಗೀಕರಿಸಲಾಗಿರುವ ಸಮುದಾಯಗಳಿಂದ ಪಕ್ಕಾ ಆಹಾರವನ್ನೂ ಸಹ ಸೇವಿಸುವುದಿಲ್ಲ.

ಸಹಭೋಜನದ ಕುರಿತಾದ ನಿಯಮಗಳೂ ಸಹ ಗೊಂದಲಕಾರಿಯಾಗಿದ್ದು ಸಂಕೀರ್ಣವಾಗಿವೆ. ಒಂದೇ ಜಾತಿಯಲ್ಲಿಯೂ ಸಹಭೋಜನವನ್ನು ನಿಷೇಧಿಸುವ ಸ್ತರಗಳಿರಬಹುದು. ಕನ್ಯಾಕುಬ್ಜ ಬ್ರಾಹ್ಮಣರ ಕುರಿತಾಗಿ, "ಮೂವರು ಕನ್ನೋಜಿನವರು, ಹದಿಮೂರು ಒಲೆಗಳು" - ಮೂವರು ಕನ್ಯಾಕುಬ್ಜ ಬ್ರಾಹ್ಮಣರು ತಮ್ಮ ಆಹಾರವನ್ನು ಹದಿಮೂರು ಪ್ರತ್ಯೇಕ ಒಲೆಗಳಲ್ಲಿ ತಯಾರಿಸುತ್ತಾರೆ ಎನ್ನುವ ಮಾತಿದೆ. ಈ ಮಾತಿನಲ್ಲಿ ಸಹಜವಾಗಿಯೇ ಅತಿಶಯೋಕ್ತಿ ಇದೆ. ಆದರೆ ಇದು ಸನ್ನಿವೇಶದ ಸಂಕೀರ್ಣತೆಯನ್ನು ವಿವರಿಸುತ್ತದೆ. ಇಲ್ಲಿರುವ ಪ್ರಮುಖ ಪ್ರಶ್ನೆ: ಒಟ್ಟಿಗೆ ಊಟಕ್ಕೆ ಕುಳಿತಾಗ ಯಾರು ಯಾರಿಗೆ ಮೈಲಿಗೆಯನ್ನು ಉಂಟುಮಾಡುತ್ತಾರೆ? ಪಕ್ಕಾ ಆಹಾರದ ವಿಚಾರವಾಗಿ ನಿಷೇಧಿಸಲ್ಪಟ್ಟಿರುವ ಕೆಲವೇ ಕೆಲವು ವರ್ಗಗಳಿವೆ. ಕಚ್ಚಾ ಆಹಾರದ ವಿಚಾರದಲ್ಲಿ ಇದು ಹೆಚ್ಚಿದೆ. ಜಾತಿಗಳ ನಡುವಿನ ಸಾಮಾಜಿಕ ಅಂತರವನ್ನು ಪಾಲಿಸುವ ಉತ್ತಮ ವಿಧಾನವೆಂದರೆ ಶ್ರೇಣಿ ಮತ್ತು ಪ್ರಾಧಾನ್ಯತೆಯನ್ನು ಗಮನಿಸುವುದು, ಮದುವೆಗಳಲ್ಲಿ, ಸಾವಿನ ನಂತರದ ಹನ್ನೊಂದನೇ ಅಥವಾ ಹದಿಮೂರನೇ ದಿನದ ಶುದ್ಧೀಕರಣ ಸಂಸ್ಕಾರಗಳಲ್ಲಿ ಅಥವಾ ಸಾಮಾಜಿಕವಾಗಿ ಗಂಭೀರವಾದ ಅಪರಾಧವನ್ನು ಇಲ್ಲವೇ ಪಾಪವನ್ನು ಮಾಡಿದ ನಂತರ ನೀಡುವ ಶುದ್ಧೀಕರಣ ಔತಣದ ಕೂಟದಲ್ಲಿ ಅನುಸರಿಸುವ ಪ್ರತ್ಯೇಕತೆಯನ್ನು, ಸಮೂಹಗಳ ವಿಭಾಗೀಕರಣವನ್ನು ಗಮನಿಸುವುದು. ಇವು ನಿರ್ದಿಷ್ಟ ಪ್ರಾದೇಶಿಕ ಸನ್ನಿವೇಶದಲ್ಲಿನ ಜಾತಿಯ ಶ್ರೇಣೀಕರಣದ ಬಗ್ಗೆ ಬೆಳಕು ಚೆಲ್ಲುತ್ತವೆ.

ಶುದ್ಧ ಹಾಗೂ ಇತರೆ ಅನೇಕ ಕೆಳ ವರ್ಗಗಳ ಜಾತಿಗಳ ನಡುವಿನ ಭೌತಿಕ ಸಂಪರ್ಕವನ್ನು ತಪ್ಪಿಸಬೇಕಾಗುತ್ತದೆ. ಅಸ್ಪೃಶ್ಯತೆಯ ಅತೀವ ಆಚರಣೆಗಳ ಉದಾಹರಣೆಗಳನ್ನು ದಕ್ಷಿಣ ಭಾರತವು ನೀಡಿದೆ. ಕೆಲವು ಅತ್ಯಂತ ಕೆಳವರ್ಗಗಳ ಜಾತಿಯವರನ್ನು

ನೋಡುವುದು ಕೂಡ ಮೈಲಿಗೆ ಎಂದು ಭಾವಿಸಲಾಗುತ್ತಿತ್ತು. ಅಷ್ಟೇ ಅಲ್ಲ, ಕೆಲವೊಂದು ಜಾತಿಗೆ ಸೇರಿದವರ ನೆರಳು ಸೋಕಿದರೂ ಸಹ ಮೈಲಿಗೆ ಎನ್ನಿಸಿಕೊಳ್ಳುತ್ತಿತ್ತು. ಈ ಬಗೆಯ ಆಚರಣೆಗಳು ತಮಿಳುನಾಡು ಮತ್ತು ಕೇರಳಗಳಲ್ಲಿದ್ದವು. ಕೇರಳದಲ್ಲಿ ತಿಯಾನ್ ಜಾತಿಯವರು (ಸೇಂದಿ ತೆಗೆಯುವವರು) ನಂಬೂದರಿ ಬ್ರಾಹ್ಮಣರಿಂದ ಮೂವತ್ತಾರು ಹೆಜ್ಜೆಗಳ ಅಂತರವನ್ನೂ, ಪುಳಯನ್ (ಕೃಷಿಕರು) ಜಾತಿಯವರು ತೊಂಬತ್ತಾರು ಹೆಜ್ಜೆಗಳ ಅಂತರವನ್ನೂ ಇರಿಸಿಕೊಳ್ಳಬೇಕಿತ್ತು. ಅತಿ ಸಾಮಾನ್ಯವಾದ, ಹೆಚ್ಚು ಕಠಿಣವಲ್ಲದ ಅಸ್ಪೃಶ್ಯತೆಯ ಆಚರಣೆಯೆಂದರೆ ಶುದ್ಧ ಜಾತಿಗಳ ಭೌತಿಕ ಸಂಪರ್ಕದಿಂದ ದೂರವಿರುವುದು ಹಾಗೂ ಅವರ ಮನೆಗಳಿಗೆ ಪ್ರವೇಶವನ್ನು ನಿಷೇಧಿಸುವುದಾಗಿತ್ತು. ಅಸ್ಪೃಶ್ಯ ಜಾತಿಗಳಿಗೆ ದೇವಸ್ಥಾನಗಳಿಗೆ ಪ್ರವೇಶಿಸುವುದನ್ನು ಹಾಗೂ ಎಲ್ಲರೂ ಬಳಸುವ ಬಾವಿಗಳನ್ನು ಬಳಸುವುದನ್ನು ನಿಷೇಧಿಸಲಾಗಿತ್ತು. ಅವರ ಮನೆಗಳನ್ನು ಹಳ್ಳಿಗಳಿಂದ ಹೊರಗೆ, ಸಾಮಾನ್ಯವಾಗಿ ದೂರದಲ್ಲಿ ನಿರ್ಮಿಸಬೇಕಿತ್ತು. ಶಾಲೆಗಳಲ್ಲಿ ಅವರು ಪ್ರತ್ಯೇಕವಾಗಿ ಕೂರಬೇಕಿತ್ತು; ಟೀ ಅಂಗಡಿಗಳೂ ಸಹ ಅವರಿಗಾಗಿಯೇ ಪ್ರತ್ಯೇಕ ಲೋಟಗಳನ್ನು ಇರಿಸಿದ್ದವು. ಇದನ್ನು ಬಳಸಿದ ನಂತರ ಅಸ್ಪೃಶ್ಯರು ತಾವೇ ಅದನ್ನು ತೊಳೆದು ಪ್ರತ್ಯೇಕವಾಗಿ ಇರಿಸಬೇಕಿತ್ತು. ಕಾನೂನಾತ್ಮಕವಾಗಿ ಅಸ್ಪೃಶ್ಯತೆಯನ್ನು ನಿಷೇಧಿಸಲಾಗಿದ್ದು, ಪರಿಶಿಷ್ಟ ಜಾತಿಗಳ ಸಮಾನತೆಯನ್ನು ಸೈದ್ಧಾಂತಿಕವಾಗಿ ಒಪ್ಪಿಕೊಳ್ಳಲಾಗಿದೆ. ಆದರೆ, ಅಸಮಾಧಾನಕ್ಕೆ ಕಾರಣವಾಗುವಂತಹ ಪ್ರತ್ಯೇಕತೆಯನ್ನು ಈಗಲೂ ಮಾಡಲಾಗುತ್ತಿದ್ದು, ಸೂಕ್ಷ್ಮವಾದ ಭೇದಗಳು ಈಗಲೂ ಅಸ್ತಿತ್ವದಲ್ಲಿವೆ.

ಹಿಂದೆ, ಜಾತಿಯೊಂದರ ಸದಸ್ಯರು ಸಾಮಾನ್ಯವಾದ ಸಂಸ್ಕೃತಿಯೊಂದನ್ನು ಹಂಚಿಕೊಳ್ಳುವ ಸಾಧ್ಯತೆ ಇಂದಿಗಿಂತಲೂ ಹೆಚ್ಚಾಗಿರುತ್ತಿತ್ತು; ಆದರೆ, ಆಗಲೂ ಸಹ ಕೆಲವೊಂದು ಪ್ರಮುಖ ಅಪವಾದಗಳಿರುತ್ತಿದ್ದವು. ಬಹುತೇಕ ಜಾತಿಗಳು ಕೆಲವೊಂದು ಪ್ರಾಂತ್ಯಗಳಿಗೆ ಸೀಮಿತವಾಗಿರುತ್ತಿದ್ದವು; ಅವು ಪ್ರಾದೇಶಿಕ ಸಂಪ್ರದಾಯದ ಭಾಗವಾಗಿರುತ್ತಿದ್ದವು, ಅಲ್ಲದೆ, ಕೆಲವೊಂದು ಪ್ರತ್ಯೇಕ ಜಾತಿಗಳು ವಿಶಿಷ್ಟ ಸಾಂಸ್ಕೃತಿಕ ಗುಣಲಕ್ಷಣಗಳನ್ನು ಹೊಂದಿರುತ್ತಿದ್ದವು. ರಜಪೂತರು ಇದಕ್ಕೆ ಅಪವಾದವಾಗಿದ್ದರು; ಅವರು ವ್ಯಾಪಕ ಹಾಗೂ ಸ್ಪಷ್ಟ ಪ್ರಾದೇಶಿಕ ಭಿನ್ನತೆಗಳನ್ನು ಹೊಂದಿದ್ದರಲ್ಲದೆ, ಸಜಾತಿ ವಿವಾಹಗಳನ್ನು ನಿಗದಿಪಡಿಸಲಿಲ್ಲ. ಸಂಸ್ಕೃತಿ, ಭಾಷೆಗಳಲ್ಲಿ ವಿವಿಧ ಪ್ರಾದೇಶಿಕ ಸಮೂಹಗಳು ಭಿನ್ನಾಭಿಪ್ರಾಯಗಳನ್ನು ಹೊಂದಿದ್ದರೂ ತಮ್ಮ ನಡುವೆ ವಿವಾಹಗಳನ್ನು ತಳ್ಳಿಹಾಕಲಿಲ್ಲ. ಅಧಿಕಾರ ಮತ್ತು ಸಂಪತ್ತು ಕೆಲವೊಂದು ವರ್ಗಗಳಿಗೆ ನಿರ್ದಿಷ್ಟ ಸಾಂಸ್ಕೃತಿಕ ಚಹರೆಗಳನ್ನು ಒದಗಿಸಿತ್ತು. ಇದು ಬಡವರ್ಗಗಳಿಗೆ ಸಾಧ್ಯವಿರಲಿಲ್ಲ.

ಬಹುತೇಕ ಜಾತಿಗಳು ಹಳ್ಳಿಯ ಮಟ್ಟದಲ್ಲಿ ಹಾಗೂ ಹಳ್ಳಿಗಳ ನಡುವೆ ಸಂಘರ್ಷಗಳನ್ನು ಪರಿಹರಿಸಿಕೊಳ್ಳುವ ವ್ಯವಸ್ಥೆಯನ್ನು ಹೊಂದಿವೆ. ಈಗ ಅವುಗಳು ಬಲಹೀನಗೊಳ್ಳುತ್ತಿದ್ದರೂ ಅವುಗಳನ್ನು ತಳ್ಳಿಹಾಕುವಂತಿಲ್ಲ. 5ನೇ ಅಧ್ಯಾಯದಲ್ಲಿ ಅವುಗಳ ಬಗ್ಗೆ ತಿಳಿಯೋಣ.

ಆಧುನಿಕ ಕಾಲಘಟ್ಟಗಳಲ್ಲಿ ಜಾತಿಗಳ ಆಚರಣಾ ಆಯಾಮವು ಬಹುತೇಕವಾಗಿ ಸವಕಳಿಗೊಂಡಿದೆ. ಆದರೆ, ಊಹಿಸಿರದ ಮೂಲದಿಂದ ಜಾತಿಗಳು ಕೆಲಮಟ್ಟಿಗಿನ ಬಲವನ್ನು ಪಡೆಯುತ್ತಿವೆ. ಪ್ರಜಾಪ್ರಭುತ್ವದಲ್ಲಿನ ಚುನಾವಣೆಗಳಲ್ಲಿ ಜನರನ್ನು ಒಟ್ಟಾಗಿಸುವಂತಹ ಹಲವು ರಚನೆಗಳ ಅಗತ್ಯವಿರುತ್ತದೆ. ಈ ನಿಟ್ಟಿನಲ್ಲಿ ಜಾತಿಯ ಹೆಸರಿನಲ್ಲಿ ಒಗ್ಗಟ್ಟು ಸಾಧಿಸುವುದು ರಾಜಕೀಯವಾಗಿ ಗಾಢ ಪ್ರಭಾವವನ್ನು ಬೀರುವಂಥದ್ದಾಗಿದೆ. ಹಾಗಾಗಿ ಇದನ್ನು ವ್ಯಾಪಕವಾಗಿ ಬಳಸಲಾಗುತ್ತದೆ, ಆದರೆ, ಅನೇಕ ಕ್ಷೇತ್ರಗಳಲ್ಲಿ ಪ್ರಮುಖ ಅಭ್ಯರ್ಥಿಗಳು ಒಂದೇ ಜಾತಿಯವರಾಗಿರುತ್ತಾರೆ. ಇದು ರಾಜಕೀಯವಾಗಿ "ಜಾತಿಯ ದಾಳ"ದ ಪರಿಣಾಮವನ್ನು ತಗ್ಗಿಸುತ್ತದೆ. ಮತ್ತೊಂದು ಕಂಡುಬರುವ ಪ್ರವೃತ್ತಿ ಎಂದರೆ, ಬಲಿಷ್ಠ ಮತ್ತು ಧನಿಕ ಜಾತಿಗಳು ಒಗ್ಗೂಡಿ ಹಳ್ಳಿಗಳಲ್ಲಿ ತಮ್ಮ ಹಿಡಿತವನ್ನು ಕಾಪಾಡಿಕೊಳ್ಳುವುದು. ಈ ಕೂಟವು ಭೀತಿಯುಂಟುಮಾಡುವ ಮೂಲಕ ಹಾಗೂ ಆರ್ಥಿಕ ಮತ್ತು ರಾಜಕೀಯ ಪ್ರಭಾವವನ್ನು ಬಳಸುವ ಮೂಲಕ ತಳ ಸಮೂಹಗಳ ಮೇಲೆ ಹಿಡಿತ ಸಾಧಿಸುತ್ತದೆ. ಬಂಡಾಯದ ಸಣ್ಣದೊಂದು ಕುರುಹನ್ನೂ ಸಹ ದೈಹಿಕವಾಗಿ ದೌರ್ಜನ್ಯವೆಸಗುವ (ಅತ್ಯಾಚಾರ ಹಾಗೂ ಕೊಲೆಯೂ ಸೇರಿದಂತೆ) ಮೂಲಕ, ಬೆಳೆದು ನಿಂತ ಬೆಳೆಗಳ ನಾಶಮಾಡುವ ಮೂಲಕ, ಇಡೀ ಹಳ್ಳಿಗೇ ಬೆಂಕಿ ಹಚ್ಚುವ ಮೂಲಕ ದಮನಿಸಲಾಗುತ್ತದೆ. ಬಡವರನ್ನು ಬಲವಂತವಾಗಿ ಪ್ರಭಾವಿಗಳ ಪರವಾಗಿರುವ ಅಭ್ಯರ್ಥಿಗೆ ಮತ ಚಲಾಯಿಸುವಂತೆ ಮಾಡುವ ಮೂಲಕ ಅಥವಾ ಅವರು ಮತ ಹಾಕುವುದನ್ನು

ತಡೆಯುವ ಮೂಲಕ ಚುನಾವಣಾ ಫಲಿತಾಂಶಗಳನ್ನು ಪ್ರಭಾವಿಸಲಾಗುತ್ತದೆ. ಹೀಗೆ, ಜಾತಿಯನ್ನು ಅಧಿಕಾರದ ಹಿತಾಸಕ್ತಿಗಳೊಂದಿಗೆ ಜೋಡಿಸುವುದು ದೇಶದ ಪ್ರಜಾಪ್ರಭುತ್ವದ ಪ್ರಕ್ರಿಯೆಗಳಿಗೆ ಹಾನಿಯುಂಟುಮಾಡುತ್ತಿದೆ.

ಭಾರತದ ಜಾತಿ ವ್ಯವಸ್ಥೆಯ ಬಗ್ಗೆ ದೇಶದೊಳಗೆ ಹಾಗೂ ಹೊರಗೆ ಕಟುವಾಗಿ ವಿಮರ್ಶಿಸಲಾಗಿದೆ. ಹಾಗಿದ್ದರೂ ವರ್ಣ ಮತ್ತು ಜಾತಿಗಳು ಅಸಾಧಾರಣ ತಾಳಿಕೆಬಾಳಿಕೆ, ಪುಟಿದೇಳುವಿಕೆಗಳಿಂದ (ಚೇತರಿಕೆಗಳಿಂದ) ಮುಂದುವರೆದಿವೆ; ತಮ್ಮ ಮೇಲಿನ ಎಲ್ಲಾ ಹಲ್ಲೆಗಳನ್ನು ಎದುರಿಸಿಯೂ ಅವು ಅಸ್ತಿತ್ವದಲ್ಲಿವೆ. ಆದರೆ, ಕಾಲ ಬದಲಾದಂತೆ ಅವುಗಳು ಹೊಂದಾಣಿಕೆಯನ್ನು ಮಾಡಿಕೊಳ್ಳಬೇಕಾಗಿದೆ. ಉದಾಹರಣೆಗೆ, ಅಸ್ಪೃಶ್ಯತೆಯ ಆಚರಣೆಯಲ್ಲಿ, ಸಹಭೋಜನದ ವಿಚಾರದಲ್ಲಿ, ಜಾತಿ ಆಧಾರಿತ ವೃತ್ತಿಗಳಲ್ಲಿ ಗಣನೀಯ ಪ್ರಮಾಣದ ಸಡಿಲಿಕೆ ಉಂಟಾಗಿದೆ. ಆದರೆ ಇದೇ ವೇಳೆ ಈ ಹಿಂದೆ ತಿಳಿಸಿರುವಂತೆ, ಜಾತಿಗಳು ಹೊಸ ರಾಜಕೀಯ ಪಾತ್ರಗಳನ್ನು ನಿರ್ವಹಿಸತೊಡಗಿವೆ. ಹೀಗಾಗಿ, ಸ್ವಾತಂತ್ರ್ಯ ದೊರೆತು ನಲವತ್ತು ವರ್ಷಗಳೇ ಕಳೆದರೂ ವರ್ಣ-ಜಾತಿ ಕೂಟವು ಹೊಸದಾಗಿ ಸದೃಢಗೊಂಡಿದೆ.

ಹಿಂದಿನ ಅಧ್ಯಾಯಗಳಲ್ಲಿ ನಾವು ಪರಿಚಯಿಸಲ್ಪಟ್ಟ ಧರ್ಮಗಳು -ವಿಶೇಷವಾಗಿ ಕ್ರೈಸ್ತಮತ ಮತ್ತು ಇಸ್ಲಾಂ ಧರ್ಮಗಳು- ವರ್ಣ ಮತ್ತು ಜಾತಿಗಳನ್ನು ಹೇಗೆ ಒಪ್ಪಿಕೊಳ್ಳಬೇಕಾಯಿತು ಹಾಗೂ ತಮ್ಮ ಮೂಲ ನಂಬಿಕೆಗಳಲ್ಲಿ ಇಲ್ಲದ ಅದರ ಕೆಲವೊಂದು ಲಕ್ಷಣಗಳನ್ನು ಅಳವಡಿಸಿಕೊಳ್ಳಬೇಕಾಯಿತು ಎನ್ನುವುದನ್ನು ನೋಡಿದ್ದೇವೆ. ಇವು ಇಂದಿಗೂ ಮುಂದುವರೆದಿರುವುದು ಸೋಜಿಗವನ್ನು ಉಂಟುಮಾಡುತ್ತದೆ.

ಕ್ರೈಸ್ತ ಅಥವಾ ಇಸ್ಲಾಂ ಧರ್ಮದಲ್ಲಿ ನಿಖರವಾದ ವರ್ಣ ವರ್ಗೀಕರಣವನ್ನು ಮಾಡಿಲ್ಲವಾದರೂ ಮೇಲ್ಜಾತಿ ಹಾಗೂ ಕೆಳಜಾತಿಗಳಿಂದ ಮತಾಂತರ ಹೊಂದಿದವರ ನಡುವೆ ವ್ಯತ್ಯಾಸವನ್ನು ಮಾಡಲಾಗುತ್ತದೆ. ಮೇಲ್ಜಾತಿಗಳಿಂದ ಪರಿವರ್ತನೆಗೊಂಡವರು ತಮ್ಮನ್ನು ಬ್ರಾಹ್ಮಣ ಕ್ರೈಸ್ತರು ಅಥವಾ ನಾಯರ್ ಕ್ರೈಸ್ತರು ಎಂದು ಅಥವಾ ರಜಪೂತ್ ಅಥವಾ ತ್ಯಾಗಿ ಮುಸಲ್ಮಾನರು ಎಂದು ಗುರುತಿಸಿಕೊಳ್ಳುತ್ತಾರೆ. ಈ ಕುರಿತು ಮಂಡಲ್ ಆಯೋಗವು (1980) ಹೀಗೆ ವಿವರಿಸಿದೆ, ". . . ಜಾತಿ ವ್ಯವಸ್ಥೆ ಎನ್ನುವುದು ಮನಸ್ಸನ್ನು ಆಳವಾಗಿ ಆವರಿಸುವಂಥದ್ದು, ವ್ಯಕ್ತಿಯ ಸಾಮಾಜಿಕ ಪ್ರಜ್ಞೆ ಮತ್ತು ಸಾಂಸ್ಕೃತಿಕ ಆಚರಣೆಗಳ ಮೇಲೆ ಅದು ತೊಡೆಯಲಾಗದ ಗುರುತನ್ನು ಮಾಡುತ್ತದೆ."

ಜನವರಿ 1988ರ ವಾರ್ಷಿಕ ಸಭೆಯಲ್ಲಿ, ತಮಿಳುನಾಡಿನ ಬಿಷಪ್‌ಗಳು ಗುರುತಿಸಿರುವ ಅಂಶ ಹೀಗಿದೆ: "ಮತಾಂತರದ ನಂತರವೂ ಸಹ ಪರಿಶಿಷ್ಟ ಜಾತಿಯ ಕ್ರೈಸ್ತರು ಅಸ್ಪೃಶ್ಯತೆಯ ಪಾರಂಪರಿಕ ಆಚರಣೆಯ ಕಾರಣದಿಂದಾಗಿ ಗಂಭೀರವಾದ ಸಾಮಾಜಿಕ, ಶೈಕ್ಷಣಿಕ ಮತ್ತು ಆರ್ಥಿಕ ಹಿಂದುಳಿದಿರುವಿಕೆಗೆ ತುತ್ತಾಗಿದ್ದಾರೆ." 1988ರ ಫೆಬ್ರವರಿಯಲ್ಲಿ ಹೊರಡಿಸಲಾದ ಕ್ರೈಸ್ತ ಧರ್ಮಗುರುವಿನ ಪತ್ರದಲ್ಲಿ, ತಮಿಳುನಾಡಿನ ಕ್ಯಾಥೊಲಿಕ್ ಬಿಷಪ್‌ಗಳು ಈ ಸಂಗತಿಯನ್ನು ಒಪ್ಪಿಕೊಂಡಿದ್ದರು: "ಕ್ರೈಸ್ತರ ಸಾಮಾಜಿಕ ಜೀವನ ಮತ್ತು ಆಚರಣೆಗಳಲ್ಲಿ ಜಾತಿಭೇದ ಮತ್ತು ಅದರ ಫಲಿತವಾದ ಅನ್ಯಾಯ ಮತ್ತು ಹಿಂಸೆಗಳು ಇಂದಿಗೂ ಮುಂದುವರೆದಿವೆ. ಈ ಬಗ್ಗೆ ನಮಗೆ ಅರಿವಿದೆ ಮತ್ತು ಈ ಸನ್ನಿವೇಶವನ್ನು ತೀವ್ರ ನೋವಿನಿಂದ ಒಪ್ಪಿಕೊಳ್ಳುತ್ತೇವೆ." ಭಾರತೀಯ ಚರ್ಚ್‌ಗೆ ಈಗ ಅರಿವಾಗಿರುವಂತೆ, ಭಾರತದಲ್ಲಿರುವ 19 ದಶಲಕ್ಷ ಕ್ರಿಶ್ಚಿಯನ್ನರಲ್ಲಿ ಅಂದಾಜು ಶೇ.60ರಷ್ಟು ಮಂದಿ ತಾರತಮ್ಯದ ಆಚರಣೆಗಳಿಗೆ ತುತ್ತಾಗಿದ್ದು, ಅವರನ್ನು ದ್ವಿತೀಯ ದರ್ಜೆಯ ಕ್ರೈಸ್ತರಾಗಿ ಅಥವಾ ಅದಕ್ಕಿಂತಲೂ ಕೆಟ್ಟದಾಗಿ ಕಾಣಲಾಗುತ್ತಿದೆ. ದಕ್ಷಿಣ ಭಾರತದಲ್ಲಿ ಚರ್ಚ್‌ಗಳು ಹಾಗೂ ವಸತಿ ಪ್ರದೇಶಗಳಲ್ಲಿ ಪರಿಶಿಷ್ಟ ಜಾತಿಯ ಕ್ರೈಸ್ತರನ್ನು ಪ್ರತ್ಯೇಕಿಸಲಾಗುತ್ತದೆ. ಅವರ ಕೇರಿ(ಚೇರಿ) ಅಥವಾ ಕಾಲೋನಿಗಳು ಮುಖ್ಯ ವಸತಿಪ್ರದೇಶದಿಂದ ದೂರದಲ್ಲಿರುತ್ತವೆ ಹಾಗೂ ಇತರರಿಗೆ ಲಭ್ಯವಿರುವ ಸಾರ್ವಜನಿಕ ಸೌಲಭ್ಯಗಳಿಂದ ವಂಚಿತವಾಗಿರುತ್ತವೆ. ಚರ್ಚ್‌ನ ಸೇವೆಗಳ ಸಂದರ್ಭದಲ್ಲಿ ಅವರನ್ನು ಬಲಬದಿಗೆ ಪ್ರತ್ಯೇಕಿಸಲಾಗುತ್ತದೆ ಮತ್ತು ಧಾರ್ಮಿಕ ಗ್ರಂಥಗಳ ಭಾಗಗಳನ್ನು ಓದುವುದಕ್ಕಾಗಲಿ ಅಥವಾ ಪಾದ್ರಿಯವರಿಗೆ ಸಹಾಯಮಾಡುವುದಕ್ಕಾಗಲಿ ಅವಕಾಶ ನೀಡುವುದಿಲ್ಲ. ಬ್ಯಾಪ್ಟಿಸಂ(ಕ್ರೈಸ್ತ ದೀಕ್ಷೆ), ಕನ್ಫರ್ಮೇಷನ್(ದೃಢೀಕರಣ ಸಂಸ್ಕಾರ) ಮತ್ತು ಮದುವೆಯಂತಹ ಪವಿತ್ರ ಸಂಸ್ಕಾರಗಳಲ್ಲಿ ಅವರಿಗೆ ಕೊನೆಯ ಪ್ರಾಶಸ್ತ್ಯ. ಕೆಳಜಾತಿಯ ಕ್ರೈಸ್ತರ ಮದುವೆ ಅಥವಾ ಶವದ

ಮೆರವಣಿಗೆಯನ್ನು ಮುಖ್ಯ ವಸತಿಪ್ರದೇಶಗಳಲ್ಲಿ ಸಾಗುವುದಕ್ಕೆ ಬಿಡುವುದಿಲ್ಲ. ಕ್ರೈಸ್ತಧರ್ಮಕ್ಕೆ ಮತಾಂತರಗೊಂಡ ಪರಿಶಿಷ್ಟ ಜಾತಿಗಳಿಗೆ ಪ್ರತ್ಯೇಕ ಸ್ಮಶಾನಗಳಿರುತ್ತವೆ. ಅವರಲ್ಲಿ ಸಾವುಂಟಾದಾಗ ಚರ್ಚ್‌ನ ಘಂಟೆಯು ಮೊಳಗುವುದೂ ಇಲ್ಲ, ಪಾದ್ರಿಯು ಪ್ರಾರ್ಥನೆಮಾಡಲು ನಿಧನರಾದವರ ಮನೆಗೆ ಹೋಗುವುದೂ ಇಲ್ಲ. ಶವಸಂಸ್ಕಾರ ಕಾರ್ಯಗಳಿಗಾಗಿ ದೇಹವನ್ನು ಚರ್ಚ್‌ಗೆ ತೆಗೆದುಕೊಂಡು ಹೋಗುವಂತಿಲ್ಲ. ಇನ್ನು, “ಮೇಲ್ಜಾತಿ” ಹಾಗೂ “ಕೆಳಜಾತಿ”ಯ ಕ್ರೈಸ್ತರ ನಡುವೆ ವೈವಾಹಿಕ ಸಂಬಂಧಗಳು ಏರ್ಪಡುವುದಿಲ್ಲ, ಅತ್ಯಂತ ಕಡಿಮೆ ಪ್ರಮಾಣದಲ್ಲಿ ಸಹಭೋಜನ ನಡೆಯುತ್ತದೆ. ಆಗಾಗ ಅವರ ನಡುವೆ ಘರ್ಷಣೆಗಳು ನಡೆಯುತ್ತವೆ. ಕೆಳಜಾತಿಯ ಕ್ರೈಸ್ತರು ತಮ್ಮ ಪರಿಸ್ಥಿತಿಯನ್ನು ಉತ್ತಮಗೊಳಿಸಿಕೊಳ್ಳುವ ಸಲುವಾಗಿ ಸಂಘರ್ಷಗಳನ್ನು ನಡೆಸುತ್ತಿದ್ದಾರೆ; ಚರ್ಚ್ ಇದಕ್ಕೆ ಪ್ರತಿಕ್ರಿಯಿಸುತ್ತಿದೆ, ಆದರೆ ಈವರೆಗೆ ಅರ್ಥಪೂರ್ಣವೆನಿಸುವಂತಹ ಬದಲಾವಣೆಗಳು ಕಡಿಮೆ. ಮೇಲ್ಜಾತಿಯ ಕ್ರೈಸ್ತರಲ್ಲಿಯೂ ಸಹ ಜಾತಿಯ ಮೂಲಗಳನ್ನು ನೆನಪಿಸಿಕೊಳ್ಳಲಾಗುತ್ತದೆ, ಕನಿಷ್ಠ ಪಕ್ಷ ಗುಟ್ಟಾಗಿಯಾದರೂ ಅವು ಸಾಮಾಜಿಕ ಸಂಬಂಧಗಳಿಗೆ ಬಣ್ಣ ನೀಡುತ್ತವೆ.

ಮುಸಲ್ಮಾನರಲ್ಲಿ ಈ ಪರಿಸ್ಥಿತಿ ಕೊಂಚ ಭಿನ್ನವಾಗಿದೆ. ಪ್ರಾರ್ಥನೆಗಳಿಗಾಗಿ ಮಸೀದಿಗಳಿಗೆ ಪ್ರವೇಶವನ್ನು ನಿರ್ಬಂಧಿಸಲಾಗಿಲ್ಲ ಹಾಗೂ ಅಸ್ಪೃಶ್ಯತೆಯ ಆಚರಣೆ ಕಣ್ಣಿಗೆ ಕಾಣಿಸುವಂತೆ ಇಲ್ಲ. ಆದರೆ, ಸಾಮಾಜಿಕ ಸ್ಥಾನಮಾನವನ್ನು ಸೂಚಿಸುವ ಹಾಗೂ ಸಾಮಾಜಿಕ ಒಡನಾಟವನ್ನು ನಿಯಂತ್ರಿಸುವ ವರ್ಣ ಮತ್ತು ಜಾತಿಯ ಭೇದಗಳು ಅಸ್ತಿತ್ವದಲ್ಲಿವೆ. ಈ ಹಿಂದೆಯೇ ಅಶ್ರಫ್ ಮತ್ತು ಅಜ್ಲಫ್ ವರ್ಗೀಕರಣಗಳ ಬಗ್ಗೆ ಉಲ್ಲೇಖಿಸಲಾಗಿದೆ: ಅಲ್ಲದೆ, ಶರೀಫ್ ಜ಼ಾತ್ (ಮೇಲ್ಜಾತಿಯಂತಹ, ಉತ್ತಮ ಸಂಸ್ಕಾರದ ರಚನೆ) ಹಾಗೂ ಅಜ್ಲಫ್ ಜ಼ಾತ್ (ಸಾಮಾನ್ಯ, ಕೆಳಜಾತಿಯಂತಹ ರಚನೆ) ಎಂದು ಸಾಮಾನ್ಯವಾಗಿ ಮಾತನಾಡಲಾಗುತ್ತದೆ. ಈ ಭೇದಗಳು ಸಮೂಹದೊಳಗಿನ ಸಾಮಾಜಿಕ ಸಂಬಂಧಗಳಂತಹ ಮದುವೆ, ಸಹಭೋಜನ ಮತ್ತು ಆಚರಣಾ ಕಾರ್ಯಕ್ರಮಗಳು ಹಾಗೂ ಇತರೆ ಸಾಮಾಜಿಕ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳುವುದನ್ನು ನಿರ್ಧರಿಸುತ್ತವೆ. ಮೂಲಗಳನ್ನು ನೆನಪಿನಲ್ಲಿರಿಸಿಕೊಳ್ಳಲಾಗುತ್ತದೆ ಹಾಗೂ ಹಿಂದೂ ಧರ್ಮದಿಂದ ಇಸ್ಲಾಂಗೆ ಮತಾಂತರಗೊಂಡವರು ಬಹುತೇಕವಾಗಿ ಇಂದಿಗೂ ತಮ್ಮ ಮೊದಲಿನ ಜಾತಿ ಆಧರಿತ ವೃತ್ತಿಗಳನ್ನು ಮುಂದುವರೆಸಿದ್ದಾರೆ. ಮೊಘಲರ ಕಾಲದಲ್ಲಿ ಸಯ್ಯದ್, ಶೇಖ್, ಮುಘಲ್ ಮತ್ತು ಪಠಾಣ್‌ರನ್ನು ಹಿಂದೂ ಸಮಾಜದ ವರ್ಣಗಳ ವರ್ಗೀಕರಣದೊಂದಿಗೆ ಪದೇ ಪದೇ ಸಮೀಕರಿಸಲಾಗುತ್ತಿತ್ತು ಹಾಗೂ ಭಾರತದ ಕೆಲವು ಭಾಗಗಳಲ್ಲಿ ಮತಾಂತರಗೊಂಡ ಹಿಂದೂಗಳು ತಮ್ಮನ್ನು ಇವುಗಳಲ್ಲಿನ ಒಂದು ವಿಭಾಗದಲ್ಲಿ ನೋಂದಾಯಿಸಿಕೊಳ್ಳುವುದು ಅಗತ್ಯವೆಂದು ಭಾವಿಸಿದ್ದರು. ಇದು ಇಸ್ಲಾಂಗೆ ಒಪ್ಪಿತವೇ ಅಲ್ಲವೇ ಎನ್ನುವುದು ಮತ್ತೊಂದು ಪ್ರಶ್ನೆ, ಅದೇನೇ ಇದ್ದರೂ ಹಾಗೆ ಮಾಡಲಾಯಿತು ಎನ್ನುವುದು ಸತ್ಯ. ಸಯ್ಯದ್ ಸಮೂಹವು ಪ್ರವಾದಿಯವರ ಮಗಳ ಮೂಲಕ ಅವರ ಕುಟುಂಬದ ವಂಶಜರಾಗಿದ್ದಾರೆ; ಅವರು ಮೂಲತಃ ಅರಬರು. ಆದರೆ, ಇಸ್ಲಾಂಗೆ ಮತಾಂತರಗೊಂಡ ಹಲವು ಮೇಲ್ಜಾತಿಗಳು ಈ ಸ್ಥಾನಮಾನವನ್ನು ಸಾಧಿಸಿಕೊಂಡಿವೆ; ಬ್ರಾಹ್ಮಣ ಮತಾಂತರಿಗಳು ತಮ್ಮ ಸಯ್ಯದ್ ಸ್ಥಾನಮಾನವು ಅಕ್ಬರ್ ಚಕ್ರವರ್ತಿಯಿಂದಲೇ ದೃಢೀಕರಿಸಲಾಗಿದೆ ಎಂದು ಹೇಳುತ್ತಾರೆ. ಶೇಖ್ ಸಮೂಹ ಕೂಡ ಅರಬ್ ಮೂಲದ್ದು, ಆದರೆ ಅವರು ಪ್ರವಾದಿಯವರ ವಂಶಜರಲ್ಲ. ಮೊದಲನೆಯ ತಲೆಮಾರಿನ ಮತಾಂತರಿಗಳೂ ಸಹ ತಮ್ಮನ್ನು ತಾವು ಶೇಖ್‌ಗಳು ಎಂದು ಕರೆದುಕೊಂಡಿದ್ದಾರೆ. ದೆಹಲಿಯನ್ನು ಆಳಿದ ರಾಜವಂಶವಾದ ಮುಘಲರು, ನಂತರದ ಸ್ಥಾನದಲ್ಲಿದ್ದಾರೆ. ಅವರು ಟರ್ಕಿಯ ಮೂಲದವರು, ತಮ್ಮನ್ನು ತಾವು ಟರ್ಕಿಯ ಆಟಮನ್ ಅರಸರಿಂದ ಪ್ರತ್ಯೇಕವಾಗಿ ಗುರುತಿಸಿಕೊಳ್ಳಲು ಅವರು ಈ ಪದವಿಯನ್ನು ತಮಗೆ ಅಂಗೀಕೃತಗೊಳಿಸಿಕೊಂಡಿದ್ದಾರೆ. ಪಠಾಣರು ಆಫ್ಘನ್ ಮೂಲದವರು, ಆದರೆ ಅನೇಕರು ಯಾವುದೇ ವಿಧದಲ್ಲಿಯೂ ಆಫ್ಘಾನಿಸ್ತಾನದೊಂದಿಗೆ ಸಂಬಂಧ ಹೊಂದದೆ ಇದ್ದರೂ ಈ ಸ್ಥಾನವನ್ನು ಸಾಧಿಸಿಕೊಂಡರು. ಇದಲ್ಲದೆ, ಗಣನೀಯವಾಗಿ ಸ್ತರ ಬದಲಾವಣೆ ಮಾಡಿರುವುದು ಹಾಗೂ ಸಾಮಾಜಿಕವಾಗಿ ಮೇಲೇರಿರುವುದು ಕಂಡುಬರುತ್ತದೆ. ಈ ಪ್ರವೃತ್ತಿಯನ್ನು ಉದಾಹರಿಸುವಂತಹ, ಅಷ್ಟೇನೂ ಉತ್ತಮ ಅಭಿರುಚಿಯಲ್ಲಿರದ ಒಂದು ಹಾಸ್ಯ ಹೀಗಿದೆ: “ಹಿಂದಿನ ವರ್ಷ ನಾನೊಬ್ಬ ಜುಲಾಹನಾಗಿದ್ದೆ (ನೇಕಾರ). ಈ ವರ್ಷ ಶೇಖ್ ಆಗಿದ್ದೇನೆ, ಮುಂದಿನ ವರ್ಷ ಉತ್ತಮ ಬೆಳೆಯಾದರೆ, ನಾನು ಸಯ್ಯದ್ ಆಗುತ್ತೇನೆ.” ಮೇಲ್ಜಾತಿಗಳು ಅಂದರೆ ರಜಪೂತರು, ಜಾಟರು, ಮತ್ತು ಅಹಿರರು ತಮ್ಮ ಅಸ್ಮಿತೆಯನ್ನು ಉಳಿಸಿಕೊಂಡರು. ಜುಲಾಹ, ತೇಲಿ, ಭಟ್, ಕಲಾಲ್ ಮತ್ತು ಭಿಶ್ತಿ ಸಮುದಾಯಗಳನ್ನು ವಿಶೇಷ ವೃತ್ತಿಗಳಲ್ಲಿ ತೊಡಗಿಕೊಂಡಿರುವ, ವರ್ಗೀಕೃತ

ಸ್ಥಾನಮಾನ ಪಡೆದಿರುವ ಹಿಂದೂ ಜಾತಿಗಳೊಂದಿಗೆ ಹೋಲಿಸಬಹುದು. ಮುಸಲ್ಮಾನ ಧರ್ಮಜ್ಞಾನಿಗಳು ಹಾಗೂ ಸಾಮಾಜಿಕ ಸುಧಾರಕರನ್ನೂ ಸಹ ಜಾತಿಯ ಕೊನೆಗಾಣದ ಹಠಮಾರಿತನ ಕಂಗೆಡಿಸಿದೆ. ಇತ್ತೀಚಿನ ಧಾರ್ಮಿಕ ಮೂಲಭೂತವಾದದ ಅಲೆಯೂ ಸಹ ಇದನ್ನು ಕೊನೆಗಾಣಿಸಲು ಸಾಧ್ಯವಾಗಿಲ್ಲ.

ಭಾರತೀಯ ಮೂಲಗಳ ಧರ್ಮಗಳಲ್ಲಿಯೂ ಸಹ ಅಂದರೆ, ಜೈನ, ಬೌದ್ಧ ಮತ್ತು ಸಿಖ್ ಜಾತಿಗಳಲ್ಲಿಯೂ ಜಾತಿಯ ಮುಂದುವರಿಕೆಯ ಬಗ್ಗೆ ಸಾಕ್ಷ್ಯಗಳಿವೆ. ನವ ಬೌದ್ಧರಿಗೆ ತಮ್ಮ ಹಳೆಯ ಜಾತಿಗಳ ಸ್ಥಾನಮಾನಗಳಿಂದ ಕಳಚಿಕೊಳ್ಳಲು ಕಷ್ಟವಾಗಿದೆ. ಸಿಖ್ ಧರ್ಮದ ಸಮಾನತೆಯ ಆಶಯಗಳಿಗೂ ಸಹ ಜಾತಿಯ ಇರುವಿಕೆ ಹಾಗೂ ಅಸ್ಪೃಶ್ಯತೆಯ ಆಚರಣೆಯು ಧಕ್ಕೆ ತಂದಿದೆ.

ವರ್ಣ ಮತ್ತು ಜಾತಿಯ ಕಲ್ಪನೆಯ ಹಿಡಿತವು ಹೇಗಿದೆಯೆಂದರೆ ಅದು ಹಿಂದೂಧರ್ಮದಾಚೆಗೂ ವಿಸ್ತರಿಸಿ, ಭಾರತೀಯ ಸಮಾಜದ ಎಲ್ಲ ವಿಭಾಗಗಳಲ್ಲಿಯೂ ಕಾರ್ಯನಿರ್ವಹಿಸುತ್ತಿದೆ. ಈ ಮನಸ್ಥಿತಿಯನ್ನು ಬದಲಿಸಲು ಸಮಾಜ ಸುಧಾರಕರಿಂದಲೂ ಸಾಧ್ಯವಾಗಿಲ್ಲ. ಕೆಲವರಂತೂ ಈ ವಿಚಾರವಾಗಿ ಕಠಿಣ ಪರಿಶ್ರಮವನ್ನೇ ಮಾಡಿದ್ದಾಗಿದೆ.

ಸಮಕಾಲೀನ ಭಾರತೀಯ ಸಮಾಜವು ಆಧುನಿಕತೆ ಮತ್ತು ಪರಂಪರೆಗಳ ವೈರುಧ್ಯಮಯ ಸೆಳೆತಗಳನ್ನು ಅನುಭವಿಸುತ್ತಿದೆ. ಇವುಗಳ ನಡುವಿನ ಸಂಘರ್ಷವು ಕೆಲವೊಂದು ವಿಲಕ್ಷಣ ಫಲಿತಾಂಶಗಳಿಗೆ ಕಾರಣವಾಗಿದೆ. ಒಂದು ಕಡೆ, ದೇಶವು ಪ್ರಜಾಪ್ರಭುತ್ವ, ಸಮಾನತೆ, ಧರ್ಮನಿರಪೇಕ್ಷತೆ ಮತ್ತು ಸಾಮಾಜಿಕ ನ್ಯಾಯದ ಸಿದ್ಧಾಂತಗಳನ್ನು ಅಳವಡಿಸಿಕೊಂಡಿದೆ ಹಾಗೂ ಪ್ರಚಾರಮಾಡುತ್ತಿದೆ; ಮತ್ತೊಂದೆಡೆ, ಪುರಾತನ ನಿಷ್ಠೆಗಳು ಹಾಗೆಯೇ ಮುಂದುವರೆದಿವೆ, ಶೋಷಣೆ ಮಾಡುವ ವ್ಯವಸ್ಥೆಗಳಿಗೆ ಗಂಭೀರವಾಗಿ ಎಂದಿಗೂ ಸವಾಲೊಡ್ಡುವುದು ಸಾಧ್ಯವಾಗಿಲ್ಲ, ರಾಜಕೀಯ ಲಾಭಕ್ಕಾಗಿ ಪರಂಪರೆಯೆಡೆಗಿನ ಗೀಳನ್ನು ಬಳಸಿಕೊಳ್ಳಲಾಗುತ್ತಿದೆ. ಅಲ್ಲದೆ, ಧಾರ್ಮಿಕ ಪುನರುಜ್ಜೀವನ ಹಾಗೂ ಆನಂತರದ ಮೂಲಭೂತವಾದಗಳೊಂದಿಗೆ ಕಠಿಣವಾಗಿ ವ್ಯವಹರಿಸಿಲ್ಲ. ಇನ್ನು ಬೌದ್ಧಿಕವಾಗಿ ಹಾಗೂ ಭಾವಾತ್ಮಕ ಅರಿವಿನ ಹಂತದಲ್ಲಿ ಗಮನಿಸಿದರೆ, ವರ್ಣ ಮತ್ತು ಜಾತಿಯಲ್ಲಿನ ಅಮಾನವೀಯತೆ, ಅಸಮಾನತೆಯನ್ನು ಬಹಿರಂಗವಾಗಿ ಹಳಿಯಲಾಗಿದೆ, ಆದರೆ ಅದನ್ನು ಕೆಡವಲು ಬೇಕಾದ ಯಾವುದೇ ಪರಿಣಾಮಕಾರಿ ಪ್ರಯತ್ನಗಳನ್ನು ಮಾಡಿಲ್ಲ. ದೇಶದ ಜನಸಂಖ್ಯೆಯ ಅರ್ಧದಷ್ಟರಲ್ಲಿ ಪ್ರಮುಖವಾಗಿ ಪರಿಶಿಷ್ಟ ವರ್ಗ, ಪರಿಶಿಷ್ಟ ಜಾತಿ ಮತ್ತು ಇತರೆ ಹಿಂದುಳಿದ ವರ್ಗಗಳ ಸಮೂಹಗಳಿವೆಯಾದರೂ ಇವು ಒಟ್ಟು ಕೃಷಿಭೂಮಿಯಲ್ಲಿ ಶೇ.10ರಷ್ಟು ಭೂಮಿಯ ಒಡೆತನವನ್ನಷ್ಟೇ ಹೊಂದಿವೆ. ಜೀತ ಮಾಡುತ್ತಿರುವ ಬಡವರು ಮತ್ತು ಕೆಳಮಟ್ಟದ ವೃತ್ತಿಗಳಲ್ಲಿ ತೊಡಗಿರುವವರು ತಮ್ಮ ದುರಾದೃಷ್ಟದ ದುಃಸ್ಥಿತಿಯಿಂದ ಹೊರಬರಲು ಇರುವ ದಾರಿಗಳು ಅತಿ ಕಡಿಮೆ.

ಜೀತ ಪದ್ಧತಿಯ ನಿಷೇಧ ಎನ್ನುವುದು ಒಂದು ರೀತಿಯ ದಾಸ್ಯದಿಂದ ಮತ್ತೊಂದು ರೀತಿಯ ದಾಸ್ಯಕ್ಕೆ ಬದಲಾವಣೆ ಮಾಡುವುದು ಎನ್ನುವಂತಾಗಿದೆ. ಭಾರತದಲ್ಲಿ ಇಂದಿಗೂ ಸಹ 41,00,000 ಬಯಲು ಶೌಚಾಲಯಗಳಿವೆ (ಓಪನ್ ಲ್ಯಾಟ್ರಿನ್); ಇಲ್ಲಿ ಮಲವನ್ನು ಮುಚ್ಚಲ್ಪಟ್ಟಿರುವ ಡಬ್ಬಗಳಲ್ಲಿಯೋ, ಇಲ್ಲವೇ ತೆರೆದಿರುವ ಬುಟ್ಟಿಗಳಲ್ಲಿಯೋ ಒಂದು ನಿರ್ದಿಷ್ಟ ಜಾತಿಯ ಮಂದಿ ತಲೆಯಮೇಲೆ ಹೊತ್ತೊಯ್ದು ಸಾಗಿಸುತ್ತಾರೆ. ವರ್ಣ ಮತ್ತು ಜಾತಿಗಳಿಗೆ ರಾಜಕೀಯ ಸ್ವರೂಪವನ್ನು ನೀಡುತ್ತಿರುವುದು "ಕೆಳ" ಜಾತಿಗಳ ಮೇಲೆ ಹಲವು ವಿಧಗಳಲ್ಲಿ ದೌರ್ಜನ್ಯವೆಸಗಲು ಕಾರಣವಾಗಿದ್ದು, ಈ ವರ್ಗಗಳು ತಮ್ಮವರ ಪರಿಸ್ಥಿತಿಯನ್ನು ಉತ್ತಮಪಡಿಸಲು ಚುನಾವಣಾ ಶಕ್ತಿಯನ್ನು ಬಳಸುವುದನ್ನು ತಡೆಯಲಾಗಿದೆ. ಕೆಲವು ಭಾಗಗಳಲ್ಲಿ ಜಾತಿಯ ಹಿಡಿತವು ದುರ್ಬಲವಾಗಿದ್ದರೆ, ಉಳಿದೆಡೆ ಅದು ಇನ್ನಷ್ಟು ಗಟ್ಟಿಯಾಗಿ ಬಲಯುತವಾಗಿದೆ. "ಕೆಳವರ್ಗ"ಗಳು, ದುರ್ಬಲರು, ಸುಲಭಕ್ಕೆ ದೌರ್ಜನ್ಯಕ್ಕೆ ತುತ್ತಾಗುವವರ ಉದ್ಧಾರಕ್ಕಾಗಿ ಭಾರತೀಯ ಸಮಾಜ, ಅರ್ಥವ್ಯವಸ್ಥೆ ಮತ್ತು ರಾಜಕೀಯವು ಕೇವಲ ಒಣಮಾತುಗಳನ್ನಷ್ಟೇ ಆಡಿದೆಯೇ ಹೊರತು ಅವರ ಸಮಸ್ಯೆಗಳನ್ನು ಪರಿಹರಿಸಲು ಯಾವುದೇ ವ್ಯವಹಾರ್ಯ ಪರಿಹಾರಗಳನ್ನು ಹುಡುಕಲು ಅವಕ್ಕೆ ಸಾಧ್ಯವಾಗಿಲ್ಲ. ಇದರ ನಿಚ್ಚಳ ಪರಿಣಾಮವೆಂದರೆ, ರೋಷ ಮತ್ತು ಪ್ರತಿರೋಧ. ಇದು ಅರ್ಥವಾಗುವಂಥದ್ದೇ. ಪರಂಪರೆ

ತನ್ನದೇ ಆದ ಉಪಯೋಗಗಳನ್ನು ಹೊಂದಿದೆ, ಆದರೆ, ಅದರೆಡೆಗಿನ ಗೌರವವನ್ನು ನಿರಂತರ ಶೋಷಣೆ, ಅಸಮಾನತೆ ಮತ್ತು ಅನ್ಯಾಯಗಳ ಸಮರ್ಥನೆಗೆ ಬಳಸಬಾರದು. ವರ್ಣ ಮತ್ತು ಜಾತಿಯ ಕಾರ್ಯನಿರ್ವಹಣೆಯಲ್ಲಿ ಕೆಲವೊಂದು ಬದಲಾವಣೆಗಳಾಗಿವೆಯಾದರೂ ಅವು ಅತ್ಯಂತ ಮಂದಗತಿಯವು ಹಾಗೂ ಅತಿ ಕಡಿಮೆ ಪ್ರಮಾಣದವು. ಒಂದೆಡೆ, ಅಸ್ಪೃಶ್ಯತೆ ಹಾಗೂ ಜೀತಪದ್ಧತಿಯ ನಿರ್ಮೂಲನೆ, ಶಿಕ್ಷಣ ಮತ್ತು ಉದ್ಯೋಗದಲ್ಲಿ ಸಮಕಾರಕ (ಕಾಂಪೆನ್ಸೇಟರಿ) ತಾರತಮ್ಯ, ಮದುವೆಯಲ್ಲಿ ಆಯ್ಕೆಯ ಸ್ವಾತಂತ್ರ್ಯ ಮುಂತಾಗಿ ಕಾನೂನಿನ ಮೂಲಕ ಏನನ್ನು ನೀಡಲಾಗಿದೆಯೋ - ಅದನ್ನು ಮತ್ತೊಂದೆಡೆಯಿಂದ ಅಸಮರ್ಥ ಅನುಷ್ಠಾನ ಹಾಗೂ ಅಜಾಗರೂಕತೆಯಿಂದ ಕಸಿದುಕೊಳ್ಳಲಾಗಿದೆ.